

# ಆದರ್ಶ ಮಾನವ


ಲೇಖಕರು :

**ಪಂ|| ಸುಧಾಕರ ಚತುರ್ವೇದಿ**

ಬೆಂಗಳೂರು.





ಪ್ರಕಾಶಕರು :

**ಾಹಿತ್ಯ ಪ್ರಕಾಶನ ಸಮಿತಿ**

**ಸ್ಟ್, ಉಡುಪಿ-576 102.**

ದ್ರಣ | ಬೆಲೆ ರೂ. 5-00

ದಶಂಬರ ೧೯೮೯ | ಅಂಚೆ 2-00

# ಋಗ್ವೇದ ದರ್ಶನ

ಸೃಷ್ಟಿಯ ಪ್ರಭಾತ ಕಾಲದಲ್ಲಿ ಪರಮಪಿತನಾದ ಪರಮೇಶ್ವರನು ಮಾನವ ಮಾತ್ರರ ಕಲ್ಯಾಣಕ್ಕಾಗಿ ನೀಡಿದ ಜ್ಞಾನಭಂಡಾರವೇ ವೇದಗಳು. ಜಗತ್ತಿನ ಸರ್ವಶ್ರೇಷ್ಠ. ಸರ್ವಜ್ಯೇಷ್ಠ ತಿಳುವಳಿಕೆಯ ನಿಧಿಗಳಾದ ಈ ವೇದಗಳ ಬಗೆಗೆ ಇಂದಿನ ಅಜ್ಞಾನಿಗಳಲ್ಲಂತಿರಲಿ, ವಿದ್ವಾಂಸರೆನಿಸಿಕೊಂಡರಲ್ಲಿಯೂ ಹರಡಿಕೊಂಡಿರುವ ಭ್ರಾಂತಿ ಅಪಾರ. ಆದುದರಿಂದ ಜನ ಸಾಮಾನ್ಯರಿಗೂ ತಿಳಿಯುವ ಸರಳ ಕನ್ನಡದಲ್ಲಿ ಋಗ್ವೇದದ ಭಾಷ್ಯವು ವೇದವಿದರಾದ ಪಂ॥ ಸುಧಾಕರ ಚತುರ್ವೇದಿಗಳ ಲೌಹ ಲೇಖನಿಯಲ್ಲಿ ಮೂಡಿಬಂದಿದೆ. ಪ್ರಾರಂಭದಲ್ಲಿ 164 ಪುಟಗಳಷ್ಟು ವಿಸ್ತೃತವಾದ ಭೂಮಿಕೆಯಲ್ಲಿ ನಾಲ್ಕೂ ವೇದಗಳ ಅಧ್ಯಯನಕ್ಕೆ ಬೇಕಾದ ಮೂಲ ಭೂತ ವಿಚಾರಗಳನ್ನು ಕೊಡಲಾಗಿದೆ.

ಜ್ಞಾನ-ವಿಜ್ಞಾನಗಳ ಭಂಡಾರವಾದ ವೇದಗಳ ಅಪೌರುಷೇಯತ್ವ, ವೇದ ಭಾಷೆಯ ಮುಖ್ಯ ವಿಶೇಷತೆಗಳು. ವೇದಗಳ ನಿತ್ಯತ್ವ, ವೇದ ಶಬ್ದದ ನಿರ್ವಚನ, ವೇದಗಳ ಪರಿಮಾಣ, ಋಷಿ, ದೇವತೆ, ಛಂದಸ್ಸು ಮತ್ತು ಸ್ವರಗಳು, ವೇದಗಳಲ್ಲಿ ಅಡಗಿರುವ ಭಾಷಾವಿಜ್ಞಾನ. ಸೃಷ್ಟಿಜ್ಞಾನ, ಪದಾರ್ಥ ವಿದ್ಯೆ, ಆಯುರ್ವೇದಜ್ಞಾನ, ಗಣಿತ ನೌ ವಿಮಾನಾದಿಜ್ಞಾನ, ಧರ್ಮಜ್ಞಾನ, ವೇದ ಮಂತ್ರಾರ್ಥ ದರ್ಶನಕ್ಕೆ ಬೇಕಾದ ಯೋಗ್ಯತೆ, ವೇದಗಳ ಶಾಖೆಗಳು, ಬ್ರಾಹ್ಮಣ ಗ್ರಂಥಗಳು, ಅರಣ್ಯಕಗಳು, ಉಪನಿಷತ್ತುಗಳು, ವೇದಾಂಗಗಳು. ಸೂತ್ರಗ್ರಂಥಗಳು, ವೇದಗಳ ಭಾರತೀಯ ಮತ್ತು ಪಾಶ್ಚಾತ್ಯ ಭಾಷ್ಯಕಾರರು ವೇದಗಳ ಬಗೆಗಿನ ಭ್ರಾಂತಿಯುಕ್ತ ವಿಚಾರಗಳಲ್ಲಿ ವೇದಗಳ ಅಧಿಕಾರ, ವೇದಗಳಲ್ಲಿ ಅಶ್ಲೀಲತೆ ವೇದಗಳಲ್ಲಿ ಇತಿಹಾಸ, ವೇದಗಳ ರಕ್ಷಣೆ-ಇವುಗಳನ್ನು ವಿಸ್ತೃತವಾಗಿ ವಿವೇಚಿಸಲಾಗಿದೆ. ಅನಂತರ ಸಂಹಿತಾ ಪದಪಾಠ, ಅನ್ವಯ. ಶಬ್ದಾರ್ಥ, ತಾತ್ಪರ್ಯ, ವ್ಯಾಖ್ಯಾನಗಳ ಕ್ರಮದಲ್ಲಿ ಋಗ್ವೇದ ಭಾಷ್ಯ ಮುಂದುವರಿದಿದೆ, ಈ ಪುಸ್ತಕ ಪಡೆದುಕೊಳ್ಳುವವರಿಗೆ 300 ಪುಟಗಳ ಎಲ್ಲಾ ಋಗ್ವೇದ ಮಂತ್ರಗಳ ವರ್ಣಾನುಕ್ರಮಸೂಚಿಯೆಂಬ 10-00 ರೂ. ಬೆಲೆಯ ಪುಸ್ತಕವನ್ನು ಉಚಿತವಾಗಿ ಕೊಡಲಾಗುವುದು, ವೇದ ಪ್ರೇಮಿಗಳು ಅಗತ್ಯವಾಗಿ ಓದಬೇಕಾದ ಪುಸ್ತಕ.

**ಸಾದಾಪ್ರತಿ 30-00 ಉತ್ತಮ ಪ್ರತಿ 40-00** ಅಂಚೆವೆಚ್ಚ 6-00



# ಆದರ್ಶ ಮಾನವ

ಲೇಖಕರು :

ಪಂ|| ಸುಧಾಕರ ಚತುರ್ವೇದಿ

ಬೆಂಗಳೂರು.






ಪ್ರಕಾಶಕರು :

**ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ**

**ಕುಂಜಿಬೆಟ್ಟು, ಉಡುಪಿ - 576 102.**

ತೃತೀಯ ಮುದ್ರಣ — ಬೆಲೆ ರೂ. 5-00

ದಶಂಬರ ೧೯೬೮ — ಅಂಚೆ 2-00

# ವೈದಿಕ ಸಾಹಿತ್ಯ ಪ್ರಕಾಶನ ಸಮಿತಿಯ ಹೆಮ್ಮೆಯ ಪ್ರಕಟಣೆಗಳು

೧. ಋಗ್ವೇದ ದರ್ಶನ - 820 ಪುಟಗಳು ಬೆಲೆ 30-00
ಉತ್ತಮ ಪ್ರತಿ 40-00
೨. ಯೋಗಪ್ರದೀಪ - 288 ಪುಟಗಳು ಬೆಲೆ 20-00
೩. ಉಪದೇಶ ಮಂಜರಿ - 240 ಪುಟಗಳು ಬೆಲೆ 8-00
೪. ಅದ್ವೈತಮತ ಪರೀಕ್ಷಣ 32 ಪುಟಗಳು ಬೆಲೆ 2-00
೫. ಮಹರ್ಷಿ ದಯಾನಂದ ಸರಸ್ವತಿ-340 ಪುಟ ಬೆಲೆ 25-00
೬. ಸ್ವಾಮೀ ಶ್ರದ್ಧಾನಂದ - 224 ಪುಟಗಳು ಬೆಲೆ 8-00
೭. ವೈದಿಕ ಸಂಧ್ಯಾಗ್ನಿ ಹೋತ್ರವಿಧಿ - 180 ಪುಟ ಬೆಲೆ 8-00
೮. ಆರ್ಯಾಭಿವಿನಯ - 112 ಪುಟಗಳು ಬೆಲೆ 5-00
೯. ಶಾಂತಿ ಮತ್ತು ಸೌಭಾಗ್ಯ - 36 ಪುಟಗಳು ಬೆಲೆ 3-00
೧೦. ಪೂಜಾ ರಹಸ್ಯ - 64 ಪುಟಗಳು ಬೆಲೆ 4-00
೧೧. ಈಶ್ವರ ವಿಚಾರ - 54 ಪುಟಗಳು ಬೆಲೆ 2-50
೧೨. ಧರ್ಮರಹಸ್ಯ - 40 ಪುಟಗಳು ಬೆಲೆ 3-00
೧೩. ಭಗವಾನ್ ಶ್ರೀ ರಾಮಚಂದ್ರ - 72 ಪುಟ ಬೆಲೆ 5-00
೧೪. ವೇದಮಾತಾ ಗಾಯತ್ರೀ - 160 ಪುಟಗಳು ಬೆಲೆ 8-00
೧೫. ವೈದಿಕಧರ್ಮದ ಮೌಲಿಕ ತತ್ವಗಳು - 136 ಬೆಲೆ 7-00
೧೬. ವೈದಿಕ ಉಪಾಸನಾ ಪದ್ಧತಿ - 60 ಪುಟಗಳು ಬೆಲೆ 3-50
೧೭. ಆದರ್ಶ ಮಾನವ - 104 ಪುಟಗಳು ಬೆಲೆ 5-00
**18. Grace and Glory of Vedic Dharma Price 25-00**
**19. Know YourReligion** (Satyapal-U.S.A) **Price 10-00**

ಎಲ್ಲಾ ಪುಸ್ತಕಗಳನ್ನೂ ಒಮ್ಮೆಗೇ ತರಿಸುವವರಿಗೆ ಅಂಚೆವೆಚ್ಚ ಉಚಿತ ವಿ. ಪಿ. ಕ್ರಮವಿಲ್ಲ. ಮನಿಯಾರ್ಡರ್ ಮೂಲಕ ಹಣಕಳುಹಿಸಿರಿ.



# ಪ್ರಕಾಶಕರ ವಕ್ತವ್ಯ

ನಮ್ಮ ವೈದಿಕ ಸಾಹಿತ್ಯ ಸಮಿತಿಯ ವತಿಯಿಂದ "ಆದರ್ಶ ಮಾನವ" ಕೃತಿಯನ್ನು ಜನತೆಯ ಕರಕಮಲಗಳಲ್ಲಿ ಪ್ರೇಮಪುರಃಸರವಾಗಿ ಸಮರ್ಪಿಸುವ ಸಂತೋಷಪ್ರದವಾದ ಸಂದರ್ಭದಲ್ಲಿ, ಸಮಿತಿಯ ವಿಷಯದಲ್ಲಿ ನಾಲ್ಕಾರು ಆವಶ್ಯಕವಾದ ಮಾತುಗಳನ್ನಾಡುವುದು ಅಗತ್ಯವೆಂದು ತೋರುತ್ತದೆ.

ಸಂಪೂರ್ಣ ಮಾನವ ಸಮಾಜವೇ ಆಧ್ಯಾತ್ಮಿಕ ಭಾವನೆ ತಿರೋಹಿತವಾದ ಕಾರಣ ನೈತಿಕ ಮೌಲ್ಯಗಳನ್ನೇ ಕಳೆದುಕೊಂಡು, ಕೇವಲ ಭೌತಿಕ ಭೋಗವಿಲಾಸವನ್ನೇ ಜೀವನದ ಆದರ್ಶವೆಂದು ಭಾವಿಸಿ, ವಿಪರೀತವಾಗಿ ಬೆಳೆಯಿಸಿಕೊಂಡ ಭೌತಿಕ ಸ್ವಾರ್ಥಗಳ ಘೋರ ಸಂಘರ್ಷಕ್ಕೆ ಸಿಕ್ಕಿ, ಕಲ್ಪನಾತೀತವಾದ ವೇಗದಿಂಡ ಸರ್ವನಾಶದ, ತಳವೇ ಇಲ್ಲದ ಪ್ರಳಯದ ಕತ್ತಲುಗವಿದ ಹಳ್ಳದೆಡೆಗೆ, ಸಾಗುತ್ತಿರುವಾಗ, ಹೇಗಾದರೂ ಮಾಡಿ, ಏನಾದರೂ ಮಾಡಿ, ಮಿತಿಮೀರಿ ಮುಗ್ಧವಾಗಿ, ಮೇರೆಯಿಲ್ಲದ ಮಹಾಪ್ರಳಯದತ್ತ ಸಾಗುತ್ತಿರುವ ಮಾನವನ ಮನಸ್ಸಿಗೆ ಒಂದು ನಿರ್ದಿಷ್ಟವಾದ, ನೇರವಾದ, ನಾರಕೀಯ ನಡೆನುಡಿಗಳಿಂದ ದೂರಸರಿಸುವ ನಾಕವನ್ನು ಈ ಲೋಕಕ್ಕೇ ಇಳಿಸಿಕೊಡುವ ಮಹಾಪಥದತ್ತ ತಿರುಗಿಸುವ ಪ್ರಯತ್ನಕ್ಕೆ ಇದೇ ಸರಿಯಾದ ಕಾಲ-ಎಂದು ತಿಳಿದ ಸಮಿತಿಯ ಮಹಾಜನರು ಒಂದುಗೂಡಿದರು. ಗಂಭೀರವಾಗಿ ಪಕ್ಷಪಾತ–ದುರಾಗ್ರಹಗಳನ್ನು ದೂರವಿಟ್ಟು ಆಲೋಚಿಸಿದರು. ಮಾನವ ಜೀವನದ ಆಂತರಿಕ ಆವಶ್ಯಕತೆಗಳನ್ನು ಕಡೆಗಣಿಸಿ, ಕೇವಲ ಬಾಹ್ಯ ಆವಶ್ಯಕತೆಗಳ ಪೂರೈಕೆಗೆ ಮಾತ್ರ ಗಮನವಿತ್ತರೆ ಮಾನವ ಸಮಾಜ ದಾನವ ಸಮಾಜವೇ ಆಗುವುದು ಅನಿವಾರ್ಯ – ಎಂಬ ತಥ್ಯ ಎಲ್ಲರಿಗೂ ಎದ್ದು ಕಾಣಿಸಿತು.

ಆಂತರಿಕ ಆವಶ್ಯಕತೆಗಳ ಪೂರೈಕೆ ಯಾವುದೇ ಭೌತಿಕ ಸಂಪತ್ಸಾಧನಗಳಿಂದಲೂ ಆಗದು; ಆದಕ್ಕೆ ಆಧ್ಯಾತ್ಮಿಕ ಸಂಪತ್ತಿನ ಸಂಪಾದನೆಯೊಂದೇ ಉಪಯುಕ್ತ ಉಪಾಯ. ಎಂಬ ವಾಸ್ತವಿಕತೆಯ ಅನುಭವವಾದಾಗ, ಸಹಜವಾಗಿಯೇ ಸಾರ್ವಕಾಲಿಕವೂ, ಸಾರ್ವಭೌಮವೂ, ಸಮಸ್ತ ವಿದ್ಯಾವಿಜ್ಞಾನಗಳ ಅಕ್ಷಯ ಭಂಡಾರವೂ, ಈಶ್ವರಪ್ರಣೀತವೂ ಆದ ವೇದಗಳ ಕಡೆಗೆ ಎಲ್ಲರ ದೃಷ್ಟಿಗಳೂ ಹೊರಳಿದವು. ವಿಚಾರ - ಮಂಥನವಾದ ನಂತರ, ವೇದೋಕ್ತ ಸರ್ವಮಾನವ ಧರ್ಮದ ಪ್ರಸಾರಣದಿಂದ ಮಾತ್ರ ಭೂಮಂಡಲದಲ್ಲಿ ಮಧುರವಾದ ಶಾಂತಿ ಹರಡೀತು; ಅದರ ಪರಿಣಾಮವಾಗಿ ಸುಖ ತನ್ನಷ್ಟಕ್ಕೆ ತಾನೇ ವ್ಯಕ್ತಿ-ವ್ಯಕ್ತಿಯ ಬಾಳಿಗೂ ಇಳಿದು ಬಂದೀತು - ಎಂಬ ನಿಶ್ಚಯವೂ ಸಮನಿಸಿತು.

ಹೀಗೆ, ಮಾನವ ಮಾತ್ರರ ಸರ್ವಾಂಗೀಣ ಸಮುತ್ಥಾನಕ್ಕಾಗಿ ವೈದಿಕ ಧರ್ಮದ ಪ್ರಚಾರವಾಗಬೇಕಾದರೆ, ವೈದಿಕ ಸಾಹಿತ್ಯದ ಬೇರೆ ಬೇರೆ ಅಂಗಗಳ ಮೇಲೆ ಸರಳವಾದ ಶೈಲಿಯಲ್ಲಿ ಪ್ರಕಾಶ ಬೀರುವ ಪುಸ್ತಕಗಳ ಪ್ರಕಾಶನವಾಗಬೇಕು. ಆರ್ಥಿಕ ಹಾಗೂ ಸಾಮಾಜಿಕ ಸಮಸ್ಯೆಗಳ ಸುಳಿಗೆ ಸಿಕ್ಕಿ, ವಿಮತೀಯರೊಡ್ಡುವ ಭೌತಿಕ ಪ್ರಲೋಭನಗಳ ಜಾಲದಲ್ಲಿ ಬಿದ್ದು, ಸತ್ಯಸನಾತನ ವೈದಿಕ ಧರ್ಮಕ್ಕೆ ತಿಲಾಂಜಲಿಯಿತ್ತು, ಅನ್ಯಮತೀಯರಾಗುತ್ತಿರುವ ಅಸಹಾಯ ಹಿಂದೂಗಳ ರಕ್ಷಣೆಗಾಗಿ ಅನಾಥಾಲಯಗಳು, ಅಬಲಾಶ್ರಮಗಳು, ಉಚಿತ ಚಿಕಿತ್ಸಾಲಯಗಳು, ಯೋಗಸಾಧನಾಶ್ರಮ, ವೈದಿಕ ಸಾಹಿತ್ಯ ಪ್ರಕಾಶನಕ್ಕಾಗಿ ತಮ್ಮದೇ ಆದ ಮುದ್ರಣಾಲಯ, ಯೋಗ್ಯ ಧರ್ಮಪ್ರಚಾರಕರ ಪ್ರಶಿಕ್ಷಣಕ್ಕಾಗಿ ಉಪದೇಶಕ ವಿದ್ಯಾಲಯ - ಈ ಮೊದಲಾದ ಸಂಸ್ಥೆಗಳನ್ನು ಸ್ಥಾಪಿಸಬೇಕು - ಎಂಬ ಅತ್ಯಂತ ಪವಿತ್ರವೂ, ರಾಗದ್ವೇಷರಹಿತವೂ ಆದ ಸಂಕಲ್ಪವನ್ನು ಮಾಡಿಕೊಂಡು, ಸದಾಶಯರಾದ ಮಹಾಜನರು **"ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ"** ವನ್ನು ಸ್ಥಾಪಿಸಿದರು.

ಮೇಲೆ ಹೇಳಿರುವ ಮಾತುಗಳಿಂದ ಸಮಿತಿಯ ಉದ್ದೇಶ್ಯಗಳ ಮೇಲೆ ಸಾಕಾದಷ್ಟು ಬೆಳಕು ಬೀಳುವುದು. ಸಂಕ್ಷೇಪವಾಗಿ ಹೇಳುವುದಾದರೆ, ಸಮಿತಿಯು ನಿರಾಕಾರ - ನಿರ್ವಿಕಾರನೂ, ಸರ್ವವ್ಯಾಪಕ - ಸರ್ವಜ್ಞನೂ,

# III

ಸಚ್ಚಿದಾನಂದ ಸ್ವರೂಪನೂ, ಸೃಷ್ಟಿ - ಸ್ಥಿತಿ – ಪ್ರಳಯಕರ್ತನೂ, ವಿಶ್ವ ಚೇತನನೂ, ಅದ್ವಿತೀಯನೂ, ಆದ, ವೇದಗಳಲ್ಲಿ ಪ್ರತಿಪಾದಿತನಾಗಿರುವ ಏಕಮಾತ್ರ ಪರಮಾತ್ಮನಲ್ಲಿ ಭಕ್ತಿಯಿಟ್ಟು, ಅವನನ್ನೇ ಸರ್ವತೋಮುಖ ಪ್ರಗತಿಗಾಗಿ ಆರಾಧಿಸುವುದು. ಪರಿಚ್ಛಿನ್ನರೂ, ಅಲ್ಪಶಕ್ತರೂ ಅಲ್ಪಜ್ಞರೂ ಆದ ಜೀವಾತ್ಮರುಗಳನ್ನೂ ಅನಾದಿ–ಅನಂತಚೇತನರೆಂದು ವೇದಗಳಲ್ಲಿ ಪ್ರತಿ ಪಾದಿಸಿರುವಂತೆ ಅಂಗೀಕರಿಸಿ, ಈ ಜೀವಾತ್ಮರುಗಳ ಪೂರ್ಣವಿಕಾಸಕ್ಕಾಗಿ, ಇಹಪರಗಳೆರಡರ ಪ್ರಾಪ್ತಿಯ ಸಲುವಾಗಿ ವೇದೋಕ್ತವಾದ ಜ್ಞಾನ–ಕರ್ಮೋ ಪಾಸನಾ ವಿಜ್ಞಾನಮಯವಾದ ವಿಶ್ವಮಾನವ ಧರ್ಮವನ್ನು ಅನುಷ್ಠಾನಕ್ಕೆ ತರುವುದು. ಈ ದಿಕ್ಕಿನಲ್ಲಿ ಜನತೆಗೆ ಪಥ ಪ್ರದರ್ಶನ ಮಾಡುವ ಸಲುವಾಗಿ ಋಗ್ವೇದ–ಯಜುರ್ವೇದ-ಸಾಮವೇದ–ಅಥರ್ವ ವೇದಗಳ ಸಂಹಿತೆಗಳಿಂದ ಜನರ ದಿನ-ದಿನದ ಜೀವನಕ್ಕೆ ನೆರವಾಗುವಂತಹ ವಿಷಯಗಳನ್ನಾರಿಸಿಕೊಂಡು ಪ್ರಥಮತಃ ಕನ್ನಡದಲ್ಲಿ, ಆವಶ್ಯಕತೆ ಹಾಗೂ ಕರೆ ಬಂದಾಗ ಇಂಗ್ಲಿಷ್ ಹಾಗೂ ಹಿಂದೀ ಭಾಷೆಗಳಲ್ಲಿಯೂ ಸರಳವೂ, ಸುಬೋಧವೂ ಆದ ಕಿರು ಹೊತ್ತಿಗೆಗಳನ್ನೂ, ಗ್ರಂಥಗಳನ್ನೂ ವೈದಿಕ ವಿದ್ವಾಂಸರಿಂದ ಬರೆಯಿಸಿ ಪ್ರಕಟಿ ಸುವುದು. ಮತ–ಮತಾಂತರಗಳಲ್ಲಿ ಹರಿದು ಹಂಚಿ ಹೋಗಿರುವ ಸರ್ವಾತ್ಮೈಕತಾ ಸಾಧನವಾದ ಪವಿತ್ರ ಧರ್ಮವನ್ನೇ ದ್ವೇಷಾಸೂಯೆಗಳ ತೀಕ್ಷ್ಣ ಶಸ್ತ್ರವಾಗಿ ಪರಿವರ್ತಿಸಿಕೊಂಡು, ಭಗವಂತನು ಒಂದಾಗಿ ಸೃಜಿಸಿದ ಮಾನವ ಜಾತಿಯನ್ನು ನೂರು – ನೂರು, ಸಾವಿರ–ಸಾವಿರ ಖಂಡಗಳಾಗಿ ತುಂಡರಿಸಿರುವ, ಆಕಾರದಿಂದ ಮಾತ್ರ ಮಾನವರಾಗಿಯೇ ಕಂಡರೂ ಅಂತರ್ವಿ ಕಾರದಿಂದಾಗಿ ದಾನವರೇ ಆಗಿರುವ ಸರ್ವರನ್ನೂ ವಿಶಾಲ ವೈದಿಕ ಧರ್ಮದ ಸುಖ-ಶಾಂತಿಪ್ರದಾಯಕವಾದ ಆಶ್ರಯಕ್ಕೆ ತರುವ ಗುರುತರವಾದ ಉತ್ತರ ದಾಯಿತ್ವವನ್ನು ಹೊತ್ತೇ ರೂಪತಾಳಿರುವ 'ಸಮಿತಿ'ಯು ಧರ್ಮಾಭಿಮಾನಿ ಗಳೂ ಆದರಣೀಯರೂ ಆದ ಮಹನೀಯರುಗಳ ಕರ್ತವ್ಯಪಥದಲ್ಲಿ ಮುಂದೆ ಮುಂದೆ ಸಾಗುತ್ತಿದೆ :—

ಈ ಸಮಿತಿಯು ನಿಜವಾಗಿ ತನ್ನ ಬೃಹದುದ್ದೇಶ್ಯಗಳ ಸಾಧನೆಯಲ್ಲಿ ಸಫಲವಾಗಬೇಕಾದರೆ, ಜನತೆಯ ಪೂರ್ಣ ಸಹಕಾರ ಆವಶ್ಯಕ ಮಾತ್ರವಲ್ಲ;

ಸರ್ವಥಾ ಅನಿವಾರ್ಯವೇ ಆಗಿದೆ. ಜನತೆ ಯಾವ ಪ್ರಮಾಣದಲ್ಲಿ ಸಹಾಯ ವನ್ನು ನೀಡುವುದೋ, ಅದೇ ಪ್ರಮಾಣದಲ್ಲಿ ಸಮಿತಿಯು ತನ್ನ ಜನೋಪ ಯೋಗೀ ಕಾರ್ಯಕ್ರಮಗಳನ್ನು ವಿಸ್ತರಿಸುತ್ತಾ ಹೋಗಲಿದೆ ಎಂಬುದು ಗಮನೀಯ. ಎಂತಲೇ ಜನತೆ ಯಾವ ರೀತಿ ಸಹಾಯ ನೀಡಬಹುದೆಂಬು ದನ್ನೂ ಇಲ್ಲಿ ಸೂಚಿಸುತ್ತಿದ್ದೇವೆ :—

**ವೇದಾಭಿಮಾನಿಗಳು ಸಮಿತಿಗೆ ಈ ರೀತಿ ಸೇವೆಸಲ್ಲಿಸಬಹುದು**

| | | | |
|---|---|---|---|
| ರೂ. | 10,000/– | ಅರ್ಪಿಸಿ | ವೇದ ಸಂರಕ್ಷಕರಾಗುವುದು |
| ರೂ. | 5,000/- | ” | ವೇದ ಪೋಷಕರಾಗುವುದು |
| ರೂ. | 2,500/– | ” | ವೇದಾಶ್ರಯದಾತರಾಗುವುದು |
| ರೂ. | 1,500/– | ” | ವೇದ ರಕ್ಷಣೆಗೆ ದಾನಿಗಳಾಗುವುದು |
| ರೂ. | 500/– | ” | ವೇದ ಪ್ರಚಾರಕ್ಕೆ ಹಿತಚಿಂತಕರಾಗುವುದು |

**ವಿ. ಸೂ. : ಪ್ರತಿ ತಿಂಗಳೂ ತಮಗೆ ಯುಕ್ತ ಕಂಡ ರೀತಿಯಲ್ಲಿ ವೇದರಕ್ಷಣೆಗೆ ತಮ್ಮ ತಮ್ಮ ಶಕ್ತ್ಯಾನುಸಾರ ದಾನ ನೀಡುವುದು.**

ಈ ರೀತಿ ಧನಸಹಾಯ ಮಾತ್ರವೇ ಅಲ್ಲ, ಬೇರೆ ಇನ್ನಾವುದೇ ರೀತಿ ಯಲ್ಲಿ ಸಾಧ್ಯವಿದ್ದರೆ, ಸಮಿತಿಗೆ ಜನತೆ ನೆರವು ನೀಡಬಹುದು. ಭೂದಾನ, ಗೃಹದಾನ, ಅನ್ನದಾನ, ವಸ್ತ್ರದಾನ, ಪುಸ್ತಕದಾನ, ಶ್ರಮದಾನ, ಔಷಧದಾನ, ಸಮಯದಾನ. ಹೀಗೆ ಎಷ್ಟೋ ರೀತಿ ಜನತೆ ನಮಗೆ ನೆರವಾಗಬಹುದಾಗಿದೆ. ಸಮಿತಿ ನಿರೀಕ್ಷಿಸುವುದು ಪರಿಶುದ್ಧ ಮಾನವೀಯತೆಯನ್ನು ಮಾತ್ರ; ಜಾತಿಭೇದ–ಉಚ್ಚನೀಚ–ಮೊದಲಾದುವುಗಳ ಗಂಧ ಕೂಡ ಸಮಿತಿಯ ಬಳಿ ಸುಳಿಯಲಾರದು. ಸರಕಾರದ ಯಾವ ಧೋರಣೆಗಳಿವೆಯೋ ಅದಕ್ಕೆ ಪೂರಕವಾಗಿ ಆತ್ಮಿಕ ಸಾಮಾಜಿಕ ಮತ್ತು ರಾಷ್ಟ್ರೀಯ ವಿಚಾರಗಳನ್ನು ಸಮಿತಿಯು ಪವಿತ್ರವೈದಿಕ ತತ್ವಗಳ ಮೂಲಕ ಜನತೆಯಲ್ಲಿ ಪ್ರಕಾಶವನ್ನು ಬೀರುತ್ತದೆ. ಅದಕ್ಕಾಗಿ ಸಾರ್ವಜನಿಕರ ನೆರವು ಅಗತ್ಯವಿದೆ.

"ಆದರ್ಶ ಮಾನವ" ಶ್ರೀ ಪಂಡಿತ ಸುಧಾಕರ ಚತುರ್ವೇದಿಗಳ ರಚನೆ. ಈ ಹಿಂದೆ ವೇದ ಸಂದೇಶವೆಂಬ ಮಾಸಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಬಹುಜನರ ಅಪೇಕ್ಷೆಯಂತೆ ಪುಸ್ತಕ ರೂಪವಾಗಿ ಸಮಿತಿಯು ಪುನಃ ಪ್ರಕಟಿಸಲು ಇಚ್ಛಿಸಿದೆ. ಇದನ್ನು ಓದಿದ ವ್ಯಕ್ತಿಗಳು ಮುಕ್ತಕಂಠದಿಂದ ಹೊಗಳುತ್ತಿದ್ದಾರೆ. ಪಠ್ಯಪುಸ್ತಕ ನಿರ್ದೇಶನಾಲಯದವರು ಹೈಸ್ಕೂಲು ಮತ್ತು ಕಾಲೇಜುಗಳಲ್ಲಿ ಈ ಗ್ರಂಥವನ್ನು ವಿದ್ಯಾರ್ಥಿ-ವಿದ್ಯಾರ್ಥಿನಿಯರು ಕಡ್ಡಾಯವಾಗಿ ಓದಲು ನಿರ್ದೇಶಿಸಿದರೆ ಬಹಳಷ್ಟು ಉಪಕಾರವಾದೀತು. ಒಂದೊಮ್ಮೆ ಓದಿದ ಯಾವ ವ್ಯಕ್ತಿಯೂ ತನ್ನ ಜೀವನದಲ್ಲಿ ಸ್ವಲ್ಪವಾದರೂ ಪರಿವರ್ತನೆಯಾಗದಿರಲಾರ. ಅಷ್ಟು ಪ್ರಭಾವಿತವಾಗಿದೆ ಈ ಗ್ರಂಥ. ಪ್ರಥಮವಾಗಿ ಮುದ್ರಿಸಿದ ಆದರ್ಶ ಮಾನವ ಪ್ರತಿಗಳು ಬಹುಬೇಗನೆ ಮುಗಿದು ಆ ಬಗ್ಗೆ ಬೇಡಿಕೆಗಳು ತುಂಬಾ ಬಂದಕಾರಣ ಈಗ ಪರಿಶುದ್ಧ ಸಂಸ್ಕರಣದೊಂದಿಗೆ ಪುನಃ ಮುದ್ರಣಮಾಡಿ ಪ್ರಕಟಿಸುತ್ತಿದ್ದೇವೆ. ಹಿಂದಿನ ಕೃತಿಯಲ್ಲಿ ಅನೇಕ ಮುದ್ರಣದೋಷಗಳು ಇದ್ದು ಅದನ್ನು ಈಗ ತಿದ್ದಿ ಸರಿಪಡಿಸಲಾಗಿದೆ.



## ವಿದ್ಯಾರ್ಥಿ – ವಿದ್ಯಾರ್ಥಿನಿಯರಿಗೆ ಸಮಿತಿಯ ಕರೆ

ಅತ್ಯಂತ ಪ್ರಿಯರಾದ ವಿದ್ಯಾರ್ಥಿ-ವಿದ್ಯಾರ್ಥಿನಿಯರೇ !

ಇಂದಿನ ವಿದ್ಯಾರ್ಥಿ-ವಿದ್ಯಾರ್ಥಿನಿಯರೇ ಮುಂದಿನ ರಾಷ್ಟ್ರಶಾಸಕರು; ನಿಜವಾಗಿ ನೋಡಿದರೆ, ವಿದ್ಯಾರ್ಥಿದೆಶೆಗಿಂತ ಆಕರ್ಷಕವಾದ, ಮನೋಜ್ಞವಾದ, ಉಲ್ಲಾಸಕರವಾದ ದೆಶೆ ಮತ್ತೊಂದಿಲ್ಲ. ಮಾನವನ ವೈಯಕ್ತಿಕ ಜೀವನವೆಂತೋ, ಸಾಮಾಜಿಕ ರಾಷ್ಟ್ರೀಯ ಜೀವನವೂ ಅಂತೆಯೇ ದೃಢವಾಗಿ ನಿಲ್ಲುವುದು, ಸಮೃದ್ಧವಾಗಿ ಬೆಳೆಯುವುದು, ವಿದ್ಯಾರ್ಥಿ-ವಿದ್ಯಾರ್ಥಿನಿಯರು ವಿದ್ಯಾರ್ಥಿದೆಶೆಯಲ್ಲಿ ಗಳಿಸಿಕೊಂಡ, ಉಳಿಸಿಕೊಂಡ ಹಾಗೂ ಧಾರ್ಮಿಕ ಶಕ್ತಿಗಳ ಸಂವರ್ಧಿತ ಸಂಚಯದ ಮೇಲೆ ಅವಲಂಬಿಸಿಕೊಂಡಿದೆ.

# VI

ವಿದ್ಯಾರ್ಥಿಗಳೇ! ವಿದ್ಯಾರ್ಥಿನಿಯರೇ! ಮತ - ಸಂಪ್ರದಾಯಗಳ ಸಂಘರ್ಷ ಮಾನವ ಸಮಾಜಕ್ಕೆ ಸಾಕಷ್ಟು ಸಂಕಟವಿತ್ತಿದೆ; ಸಾಗರೋದಕ್ಕಿಂತ ಅಧಿಕವಾಗಿಯೇ ರಕ್ತದ ಹಾಗೂ ಅಶ್ರುವಿನ ಹೊನಲನ್ನು ಹರಿಸಿದೆ. ಈಗ ಸಮಿತಿಯು ನಿಮ್ಮ ಮುಂದೆ ಮಂಡಿಸುತ್ತಿರುವುದು ಯಾವುದೇ ಸಂಕುಚಿತ ಸಿದ್ಧಾಂತವನ್ನಲ್ಲ; ವಿಶ್ವಮಾನವ ಧರ್ಮದ ಸರ್ವಮಾನವಗ್ರಾಹ್ಯವಾದ ಸಾರ್ವಕಾಲಿಕ, ಸಾರ್ವಭೌಮ ಸತ್ಯವನ್ನು ಮಾತ್ರ. ಸಮಿತಿಯು ನಿಮ್ಮೆದುರಿಗೆ ಸ್ಥಾಪಿಸುತ್ತಿರುವುದು ಕೇವಲ ಇದೊಂದೇ ಭಗವದ್ವಾಣಿಯನ್ನು :

**ಗೂಹತಾ ಗುಹ್ಯಂತಮೋ ವಿಯಾತ ವಿಶ್ವಮತ್ರಿಣಂ ।**
**ಜ್ಯೋತಿಷ್ಕರ್ತಾ ಯದುಶ್ಮಸಿ ॥** [ಋಗ್ವೇದ :- ೧-೮೬-೧೦]

'ಗೂಢವಾಗಿ ಹುದುಗಿಕೊಂಡಿರುವ ಅಜ್ಞಾನಾಂಧಕಾರವನ್ನು ಅದುಮಿ ಬಿಡಿರಿ. ಆತ್ಮಘಾತಕವಾದ ಸಕಲ ಧ್ವಂಸಕಾರೀ ದುರ್ಗುಣಗಳನ್ನೂ ಚದುರಿಸಿ ಬಿಡಿರಿ. ನಮ್ಮೆಲ್ಲರಿಗೂ ಕಾಮ್ಯವಾದ ಜ್ಞಾನ ಜ್ಯೋತಿಯನ್ನು ಬೆಳಗಿಸಿರಿ.' ವೇದದ ಈ ಕರೆಗೆ ಓಗೊಡದ ಜನಾಂಗ ನಿಜವಾಗಿ ಹತಭಾಗ್ಯ ಜನಾಂಗವೇ!

ಆದರೆ, 'ಸುಖಬೇಕು; ಸುಖಬೇಕು' ಎಂದೇ ಹಂಬಲಿಸುವವರಿಗೆ ವಿದ್ಯೆಯು ಲಭಿಸದು. ಬಾಹ್ಯ ಶೃಂಗಾರಗಳಲ್ಲಿ, ಭಿನ್ನ ಲಿಂಗೀಯರ ಹೃದಯ ದಲ್ಲಿ ದುಷ್ಕಾಮನಾ ಜ್ವಾಲೆಯನ್ನು ಭುಗ್ಗೆಂದು ಹೊತ್ತಿಸುವ ಉಡಿಗೆ-ತೊಡಿಗೆ ಗಳನ್ನು ಧರಿಸಿ ತಿರುಗುವ, ನಕಲೀ ನಾಗರಿಕತೆಯ ಸುಳಿಗೆ ಸಿಕ್ಕಿದ ಯುವಕ-ಯುವತಿಯರು ಜೀವನ ಸೌಧದ ತಳಪಾಯವನ್ನೇ ಸಡಿಲಪಡಿಸುತ್ತಿರುತ್ತಾರೆ! ಜೀವನ, ಪುಷ್ಪದ ಹಾಸಿಗೆಯಲ್ಲ; ಮುಳ್ಳುಗಳಿಂದ ತುಂಬಿದ ಮಾರ್ಗ. ಯಾವ ವಿದ್ಯಾರ್ಥಿ - ವಿದ್ಯಾರ್ಥಿನಿಯರ ಹೃದಯಗಳು ವಿದ್ಯೆಗಿಂತಧಿಕ ಬಾಹ್ಯ ಸೌಂದರ್ಯ ಪ್ರಸಾದಗಳತ್ತ ಹೊರಳುತ್ತವೋ ಅವರು ಶಕ್ತಿಸಂಚಯವನ್ನಲ್ಲ; ಶಕ್ತಿ ದುರ್ವ್ಯಯವನ್ನೇ ಮಾಡುತ್ತಾರೆ.

ಶಕ್ತಿಯಿಲ್ಲದ ಬಾಳು ಬರಡು ಬಾಳು. ವಿದ್ಯಾರ್ಥಿ ದೆಶೆಯಲ್ಲಿ ಶಕ್ತಿ ಸಂಚಯ ಮಾಡದ ಯುವಕ-ಯುವತಿಯರು ಬೃಹದ್ರಾಷ್ಟ್ರದ ಮಹಾ

ಪ್ರಶಾಸನದ ಗುರು ಭಾರವನ್ನು ಹೊರುವತಾದರೂ ಹೇಗೆ? ಆದಕಾರಣ ಸಮಿತಿ; ಓ ವಿದ್ಯಾರ್ಥಿ-ವಿದ್ಯಾರ್ಥಿನಿಯರೇ! ನಿಮ್ಮನ್ನು ಸಭ್ಯತಾ - ಕ್ಷೇತ್ರ ದಿಂದ ದೂರಸರಿದು, ಕಾಡಾಡಿಗಳಾಗಬೇಕೆಂದೇನೂ ಹೇಳುತ್ತಿಲ್ಲ. ಉತ್ತಮ ವಾದ, ಲಕ್ಷಣವಾದ, ಭಿನ್ನಲಿಂಗೀಯರಿಗೆ ಚಿತ್ತವಿಕಾರವನ್ನುಂಟು ಮಾಡ ದಂತಹ. ಮಾನವರ್ಧಕವಾದ ಉಡುಂಗೆ-ತೊಡಿಗೆಗಳನ್ನು ತೊಡಿರಿ. ಸಿನಿಮಾ, ಟೆಲಿವಿಜನ್‌ನಂತಹ ವೈಜ್ಞಾನಿಕ ಉಪಕರಣಗಳತ್ತ ಕುದೃಷ್ಟಿಯಿಡಿರೆಂದರೇನೂ ಸಮಿತಿಯು ಹೇಳುತ್ತಿಲ್ಲ ಆದರೆ, ಬಾಹ್ಯ ಮಿತಿಮೀರಿ ಬೆಳೆದು, ಅಂತರ ಟೊಳ್ಳಾಗದಿರಲಿ. **"ಅರಂಕೃತ್ಮಾತನುಸಿ ಕ್ಷೇಷ್ಯಗ್ನೇ"** [ಋ. ೧೦.೧೫.೫] "ಓ ದೇಹಾಧಿನಾಯಂಕ ಜೀವ! ಹೊರಗಿನಿಂದ ಮಾತ್ರ ಒಳಿತಾಗಿ ಅಲಂಕಾರ ಮಾಡಿಕೊಂಡು ಒಳಗಿನಿಂದ ಅಜ್ಞಾನಾಂಧಕಾರದಲ್ಲಿ ತತ್ತರಿಸುತ್ತೀಯಲ್ಲ! ಎಂಬ ವೇದದ ಕಟಾಕ್ಷಕ್ಕೆ ಈಡಾಗಬೇಡಿರಿ. ವೇದೋಕ್ತ ಜೀವನವನ್ನೇ ಸಾಧಿಸಿರಿ.

ವಿದ್ಯಾರ್ಜನೆ, ಜ್ಞಾನಸಾಧನ, ವೈಯಕ್ತಿಕ, ಸಾಮಾಜಿಕ ರಾಷ್ಟ್ರೀಯ ಹಾಗೂ ಜಾಗತಿಕ ಉತ್ಥಾನದ ಅನಿವಾರ್ಯ ಅಡಿಗಲ್ಲು; ಆಧಾರಶಿಲೆ-ಎಂಬು ವುದು ಜೀವನ ಸಾಫಲ್ಯದ ಮೂಲ ಸೂತ್ರ; ನೆನಪಿರಲಿ. ವಿದ್ಯೆ ಸಿಕ್ಕುವುದು ಸಂಯಮಿಗಳಿಗೆ ಮಾತ್ರ ಅನುಶಾಸನಹೀನರು ತಮ್ಮ ವೈಯಕ್ತಿಕ ಹಿತವನ್ನೂ ಸಾಧಿಸಲಾರರು. ಇನ್ನು ಜಾಗತಿಕ ಹಿತ-ಪಾರಲೌಕಿಕ ಹಿತಗಳ ಮಾತುಗಳನ್ನು ನಾಲಗೆಯ ತುದಿಯ ಮೇಲೆ ತರಬೇಕಾದರೂ ಏಕೆ?

ಆದುದರಿಂದ, ವಿದ್ಯಾರ್ಥಿ-ವಿದ್ಯಾರ್ಥಿನಿಯರೇ! ಮುಂದಿನ ರಾಷ್ಟ್ರಾಧಿ ನಾಯಕರೇ! ನಿಮ್ಮೆಲ್ಲರ ಚಾರಿತ್ರ-ನಿರ್ಮಾಣದ ಮಹಾಯಜ್ಞದಲ್ಲಿ ನಿಮಗೆ ನೆರವಾಗಲು ಸಮಿತಿ ಪ್ರತಿಕ್ಷಣ ಸಿದ್ಧವಿದೆ. ಬ್ರಹ್ಮಚರ್ಯಕ್ಕಿಂತ, ಸರ್ವೇಂ ದ್ರಿಯ ನಿಗ್ರಹಕ್ಕಿಂತ ಹಿರಿಯದಾದ ತಪಸ್ಸಿಲ್ಲ. **ಏತದ್ವೋಭದ್ರಮನು ಶಾಸನಸ್ಯ"** [ಋಗ್ವೇದ :- ೧೦-೩೨-೭] ನಿಮ್ಮ ಅನುಶಾಸನದ ಶಿಸ್ತಿನ ಸಂಯಮದ ಮಹಿಮೆಯಿದು ಎನ್ನುತ್ತದೆ. ವೇದವಾಣಿ'. ಆಲಿಸಿರಿ! ಸಂಯಮದ ದಿವ್ಯ ಪರಿಣಾಮಗಳೇನೆಂಬುದನ್ನು :—

# VIII

**ಬ್ರಹ್ಮಚಾರೀ ಬ್ರಹ್ಮ ಭ್ರಾಜದ್ಬಿಭರ್ತಿ ತಸ್ಮಿನ್ ದೇವಾ ಅಧಿ ವಿಶ್ವೇಸಮೋತಾಃ । ಪ್ರಾಣಾಪಾನೌ ಜನಯನ್ನಾದ್ವ್ಯಾನಂ ವಾಚಂ ಮನೋ ಹೃದಯಂ ಬ್ರಹ್ಮಮೇಧಾಂ ॥**

[ಅಥರ್ವವೇದ :— ೧೧-೫-೨೪]

ಶಿಸ್ತನ್ನು, ಸಂಯಮವನ್ನು, ಬ್ರಹ್ಮಚರ್ಯವನ್ನು ಪಾಲಿಸುವ, ಮಾನವ ಪ್ರಕಾಶಮಯ ಪ್ರಭುವನ್ನು ತಿಳಿಯುತ್ತಾನೆ. ಸಮಸ್ತ ಸದ್ಗುಣಗಳೂ ಅವನ ಜೀವನಕ್ಕೆ ಹೊಸೆದುಕೊಳ್ಳುತ್ತವೆ. ಆ ಸಂಯುತ ಜೀವ ಪ್ರಾಣಾಪಾನ–ವ್ಯಾನಶಕ್ತಿಗಳನ್ನು ಬೆಳೆಯಿಸಿಕೊಳ್ಳುತ್ತಾನೆ. ವಾಕ್ಶಕ್ತಿ, ಮನೋಬಲ, ಹೃದಯ ವೈಶಾಲ್ಯ, ವೇದಜ್ಞಾನ, ಬುದ್ಧಿವಿಕಾಸ – ಎಲ್ಲವೂ ಅವನ ಜೀವಿತದ ಅಭಿನ್ನವಾದ ಅಂಗಗಳೇ ಆಗಿಹೋಗುತ್ತವೆ. ಇದಕ್ಕೆ ಮೀರಿದ ಸೌಭಾಗ್ಯದ ಕಲ್ಪನೆ ಮಾಡಲಾರಿಗೆ ಸಾಧ್ಯ ?

ಆದಕಾರಣ, ಸಮಿತಿಯನ್ನು ನಿಮ್ಮದಾಗಿಸಿಕೊಳ್ಳಿರಿ. ಅದರ ಕರೆಗೆ ಕಿವಿಗೊಡಿರಿ. ವಿದ್ಯಾರ್ಥಿದಶೆಯ ಕಾಲದ ಪ್ರತಿಯೊಂದು ಕ್ಷಣವೂ ಅತ್ಯಮೂಲ್ಯ; ಮಿಂಚಿದ ಕ್ಷಣ ಮಿಂಚಿ ಹೋಯಿತು. ಕರಾಳಕಾಲ ನಿಮ್ಮ ಹತ್ತಿರ ಸರಿದು ಬರುವ ಸಂಚಿನಲ್ಲೇ, ಹೊಂಚಿನಲ್ಲೇ, ಅಂಚಿನಲ್ಲಿ ಕಾದಿದ್ದಾನೆ. ರಾಜಕೀಯ ಪುಢಾರಿಗಳ ದುಷ್ಪ್ರೇರಣೆಗೆ, ಸಲ್ಲದ ಕಾರಣಗಳಿಗೆ ಬೆಲೆಕೊಟ್ಟು ಜ್ಞಾನ ಸಂಚಯದ ಅಮೂಲ್ಯ ಸಮಯವನ್ನು ನಿರರ್ಥಕವಾಗಿ ಹಾಳುಮಾಡಿಕೊಳ್ಳಬೇಡಿ. ನೀವು ರಾಷ್ಟ್ರವನ್ನಾಳುವ ಕಾಲ ಇನ್ನೂ ಮುಂದಿದೆ; ಈಗ ಆಳಲು ಬೇಕಾದ ನೈತಿಕ, ಆತ್ಮಿಕ. ಬೌದ್ಧಿಕ, ವೈಜ್ಞಾನಿಕ ಹಾಗೂ ದೈಹಿಕಶಕ್ತಿಗಳನ್ನು ಸಂಚಯಿಸುವುದು ಮಾತ್ರ ನಿಮ್ಮ ಕರ್ತವ್ಯವೇನೆಂಬುದನ್ನು ಮರೆಯದಿರಿ. ಸಮಿತಿಗೆ ನೀವು ಎಷ್ಟು ಸಾಧ್ಯವೋ, ಹೇಗೆ ಸಾಧ್ಯವೋ, ಅಷ್ಟು ಹಾಗೆ ನೆರವಾಗಿರಿ. ಸಮಿತಿಯು ಪ್ರತಿಕ್ಷಣ ನಿಮ್ಮ ನೆರವಿಗಿದೆ. ನೀವು ಸಮಿತಿಯ ಪ್ರಕಾಶನಗಳನ್ನು, ಪ್ರವಚನಗಳನ್ನು ನಿಮ್ಮ ಆತ್ಮ ವಿಕಾಸಕ್ಕಾಗಿ ಉಪಯೋಗಿಸಿಕೊಳ್ಳಿರಿ. ಆಗ ನಿಮ್ಮ ಬಾಳಿಗೆ ಬೆಳಕು ಕಾಣುವುದು. ಒಂದು ಧಾರ್ಮಿಕ ಸಂಸ್ಥೆಯ ಉನ್ನತಿಗಾಗಿ, ಸಮಿತಿಯ ಎಲ್ಲಾ ಸದುದ್ದೇಶಗಳ ಬಗ್ಗೆ ನೀವೂ ನಿಮ್ಮ ಮಿತ್ರರೂ ಸರ್ವವಿಧ ಸಹಕರಿಸುವಿರೆಂಬ ಹಿರಿದಾಸೆ ಸಮಿತಿಗಿದೆ. ●



# ಆದರ್ಶ ಸಾಧನ

## ೧

## ಆತ್ಮವಿಜಯ

ಇಂದು ಜಗತ್ತು ಅನುಪಮ ತೀವ್ರಗತಿಯಿಂದ ವಿಕಾಸದೆಡೆಗೆ ನುಗ್ಗು ತ್ತಿದೆ; ಇಂದು ಅಂಧಶ್ರದ್ಧೆಗೆ, ಕುರುಡು ನಂಬಿಕೆಗೆ – ಸೂಜಿಯ ಮೊನೆ ಯಷ್ಟೂ ಜಾಗವಿಲ್ಲ. ಶ್ರದ್ಧಾ ಪ್ರಧಾನವಾದ ಯುಗ ಭೂತದ ಗರ್ಭದಲ್ಲಡಗಿ ಹೋಯಿತು; ಇನ್ನು ಮತ್ತದು ತಲೆಯೆತ್ತುವಂತಿಲ್ಲ. ಇದು ಮೇಧಾಪ್ರಧಾನ ಯುಗ–ಎಂದು ಸಾಮಾನ್ಯವಾಗಿ ಹೇಳಲ್ಪಡುತ್ತದೆ. ಅಂಧಶ್ರದ್ಧೆಯ ಕಾಲ ತೀರಿಹೋಯಿತೆಂಬ ಮಾತನ್ನು ಬಹುಮಟ್ಟಿಗೆ ಅಂಗೀಕರಿಸಬಹುದಾದರೂ ಜಗತ್ತಿಂದು ವಿಕಾಸದ ಪ್ರಶಸ್ತ ಪಥವನ್ನೇ ತುಳಿಯುತ್ತಿದೆಯೇ–ಎಂಬ ಪ್ರಶ್ನೆ ಯನ್ನು ಸ್ವಲ್ಪ ಗಂಭೀರ ಮನೋವೃತ್ತಿಯಿಂದಲೇ ಕೇಳಬೇಕಾಗುತ್ತದೆ.

"ವಿಕಾಸವೇ ಜೀವನದ ಆದರ್ಶ"-ಎಂಬ ಬಗ್ಗೆ ಯಾರಿಗೂ ಸಂದೇಹ ವಿಲ್ಲ. ಉಪನಿಷತ್ಕಾಲದ ಮಹರ್ಷಿಗಳೂ ಸಹ ತತ್ವವಿವೇಚನೆ ಮಾಡುತ್ತಾ ಕೊನೆಗೆ ಮುಟ್ಟಿದ ಆದರ್ಶವೆಂದರೆ – **"ಯೋವೈಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ"** – ಎಂಬುದೇ. ದೊಡ್ಡದಾಗುವುದರಲ್ಲಿಯೇ ಸುಖ ವಿದೆ; ಅಲ್ಪತನದಲ್ಲಿ ಸುಖವಿಲ್ಲ–ಎಂದು ಉಪನಿಷತ್ಕಾರರು ಸ್ಫುಟವಾಗಿಯೇ ಘೋಷಿಸಿದ್ದಾರೆ.

ಇಂದಿನ ವೈಜ್ಞಾನಿಕರ ಆದರ್ಶವೂ ವಿಕಾಸವೇ; ಹಿಂದಿನಆತ್ಮಜ್ಞಾನಿ ಗಳ ಆದರ್ಶವೂ ವಿಕಾಸವೇ. ಆ ವಿಷಯದಲ್ಲಿ ಭೇದವಿಲ್ಲ. ನಮ್ಮ ಪೂರ್ವಜ ರಾದ ಋಷಿ–ಮಹರ್ಷಿಗಳು ವಿಕಾಸವಾದದ ಸ್ಥಾಪನೆ ಮಾಡುವುದರಲ್ಲಿ ಕೃತ

ಕಾರ್ಯರಾಗಿದ್ದರು. ಅಲ್ಪತನವಳಿದು ಮಹತ್ವ ಮಾನವನಲ್ಲಿ ಮನೆಮಾಡಿದ್ದಿತು. ಆದರ ಪರಿಣಾಮವಾಗಿ ಅಶ್ವಪತಿ ಮಹಾರಾಜನು ಎದೆತಟ್ಟಿ ಹೀಗೆ ಘೋಷಿಸ ಬಲ್ಲವನಾಗಿದ್ದನು :—

**ನ ಮೇ ಸ್ತೇನೋ ಜನಪದೇ ನ ಕದರ್ಯೋ ನ ಮದ್ಯಪಃ ।**
**ನಾನಾಹಿತಾಗ್ನಿರ್ನಾವಿದ್ವಾನ್ ನ ಸ್ವೈರೀ ಸ್ವೈರಿಣೀ ಕುತಃ ॥**

(ಛಾಂದೋಗ್ಯ – ಅಧ್ಯಾಯ–೫. ಖಂಡ-೧೧)

"ನನ್ನ ರಾಜ್ಯದಲ್ಲಿ ಕಳ್ಳನಿಲ್ಲ; ದುರಾಚಾರಿಯಿಲ್ಲ. ಮದ್ಯ ಪಾಯಿಯೂ ಇಲ್ಲ; ಹೋಮ ಮಾಡದವನಿಲ್ಲ. ವಿದ್ಯಾವಿಹೀನನೂ ಇಲ್ಲ. ವ್ಯಭಿಚಾರಿಯೇ ಇಲ್ಲ; ಅಂದ ಮೇಲೆ ವ್ಯಭಿಚಾರಿಣಿ ಇರಲು ಹೇಗೆ ಸಾಧ್ಯ?" ನಮ್ಮ ಪೂರ್ವಜರ ವಿಕಾಸವಾದದ ಪರಿಣಾಮ ಇಷ್ಟು ಮಧುರವಾಗಿದ್ದಿತು.

ಇಂದಿನ ವೈಜ್ಞಾನಿಕರೂ ವಿಕಾಸವಾದವನ್ನೇ ಸ್ಥಾಪಿಸುತ್ತಿದ್ದಾರೆ. ಪ್ರಕೃತಿಯಿಂದು ವಿಜ್ಞಾನಿಗಳ ದಾಸಿಯಾಗಿದ್ದಾಳೆ. ವೈಜ್ಞಾನಿಕರ ವಿಕಸಿತ ಬುದ್ಧಿಗೆ ಬೆರಗಾದ ಪ್ರಕೃತಿ ಇಂದು ಜನರನ್ನು ಸಾಗರದ ಗರ್ಭದಲ್ಲಿ, ವಾಯು ವಿನ ಉಚ್ಚಸ್ತರದಲ್ಲಿ, ಎಲ್ಲಿ ಬೇಕಾದರೂ ಸುಲಭವಾಗಿ ಕರೆದೊಯ್ಯುವ ತೀವ್ರ ಗಾಮಿ ವಾಹನಗಳನ್ನು ವೈಜ್ಞಾನಿಕರ ಅಡಿದಾವರೆಗಳಿಗೊಪ್ಪಿಸಿದ್ದಾಳೆ, ಕುಳಿತಲ್ಲಿಗೇ, ನಿಮಿಷಾರ್ಧದಲ್ಲಿ ಸಾವಿರಾರು ಮೈಲಿ ದೂರದಿಂದ ಸುದ್ದಿ ಗಳನ್ನೂ, ಸಂಗೀತಗಳನ್ನೂ–ಮಾತ್ರವಲ್ಲ–ಚಿತ್ರಗಳನ್ನೂ ಸಹ ತಂದು ಸಮ ರ್ಪಿಸಿ, ನತಮಸ್ತಕಳಾಗಿ ನಿಲ್ಲುತ್ತಾಳೆ. ತನ್ನ ಅಂಗವನ್ನೇ ಸಿಡಿಸಿ, ಲಕ್ಷಾಂತರ ಜೀವಿಗಳನ್ನು ನಿಮಿಷಮಾತ್ರದಲ್ಲಿ ಒರೆಸಿ ಹಾಕಬಲ್ಲ ಆಟಂಬಾಂಬನ್ನೂ ಸಹ ಪ್ರಕೃತಿಯಿಂದು ವಿಜ್ಞಾನಿಗಳ ಕೈಯಲ್ಲಿಟ್ಟಿದ್ದಾಳೆ; ಪೃಥ್ವಿಯ ಆಕರ್ಷಣ ದಿಂದಾಚೆ ಕೃತಕ ಗ್ರಹಗಳನ್ನು ಓಡಾಡಿಸುವ ಶಕ್ತಿ ಕೂಡ ವಿಜ್ಞಾನಿಗಳಿಗೆ ಸಿಕ್ಕಿದೆ. ಇದನ್ನೆಲ್ಲಾ ಕಂಡು, ಮಾನವನ ಬುದ್ಧಿ ವಿಕಾಸಕ್ಕೆ ಬೆರಗಾಗದವರಾರು? ಪ್ರಕೃತಿಯನ್ನು ಗೆದ್ದ ವಿಜ್ಞಾನಿ ಇಂದು ತಾನು ಅಸಮಾನ ವೀರನೆಂದು ಹೇಳಿಕೊಳ್ಳುತ್ತಾನೆ. ನಿಜ; ವೀರನೇ ಅಹುದು. ಆದರೆ, ಈ ವೀರತಾವಿಕಾಸ ತಿಂವ ಎಲ್ಲವೂ ಲಭಿಸಿತು; ಧನ, ಕನಕ, ಅಸ್ತ್ರಶಸ್ತ್ರ, ಭೂಜಲ ವಾಯು

ಯಾನಗಳು – ಎಲ್ಲವೂ ಸಿಕ್ಕಿದವು. ಆದರೆ ಇವಕ್ಕಾಗಿ ಮಾನವನು ಕೊಟ್ಟ ಬೆಲೆ ಮಾತ್ರ ಬಹಳ ಅಧಿಕ. ಶಾಂತಿಯನ್ನು ಬಲಿಯಿತ್ತು ಮಾನವನು ಇದನ್ನೆಲ್ಲಾ ಪಡೆದನು.

ಇದೇಕೆ ಹೀಗಾಯಿತು? ಶಾಂತಿಯಿಲ್ಲದ ವಿಕಾಸ, ಒಂದು ವಿಕಾಸವೇ? ವಿಜ್ಞಾನಿಗಳು ಶಾಂತಿಯ ವೈರಿಗಳೇನಲ್ಲ; ಅವರಿಗೂ ಶಾಂತಿಬೇಕು. ಶಾಂತಿಗಾಗಿಯೇ ಅವರು ವಿಕಾಸವಾದಿಗಳಾದರು. ಆದರೆ, ಈ ಘೋರ ಅಶಾಂತಿ ವಿಜ್ಞಾನ ವಿಕಾಸದ ಫಲವಾಗಿ ಅದೇಕೆ ಹುಟ್ಟಿತು? ವಿಜ್ಞಾನ ವಿಕಾಸದ ಕ್ರೂರಪದದಡಿಯಲ್ಲಿ ಮಾನವತೆ ಸಿಕ್ಕಿಕೊಂಡು ಚೀತ್ಕರಿಸುವ ಪರಿಸ್ಥಿತಿ ಆದೇತಕ್ಕುಂಟಾಯಿತು?

ಈ ಪ್ರಶ್ನೆ ಇಂದೂ ಸಹ ಬೃಹದಾಕಾರವಾಗಿ ವಿಚಾರಶೀಲರೆದುರಿಗೆ ನಿಂತಿದೆ. ಒಂದು ಸಿಕ್ಕುಗಟ್ಟಿದ ಒಗಟೆಯಾಗಿ ಪರಿಣಮಿಸಿದೆ. ವಿಜ್ಞಾನಿಗಳ ಬಳಿ ಈ ಪ್ರಶ್ನೆಗೆ ಉತ್ತರವಿಲ್ಲ. ಧೀರರಾದರೂ ಸಹ ಅಹಂಕಾರಿಗಳಲ್ಲದ ವಿಜ್ಞಾನಿಗಳು – "ನಾವು ಅರಿಯೆವು" ಎಂದರು. ಅದಕ್ಕೆ ಉತ್ತರ ದಾರ್ಶನಿಕರ ಕಡೆಯಿಂದಲೇ ಬರಬೇಕಾಗಿದ್ದಿತು; ಬಂದಿತು. ಅಂತರ್ವಿಕಾಸವನ್ನು **ಮೂಲೆಗೊತ್ತಿ ಬಹಿರ್ವಿಕಾಸವೊಂದಕ್ಕೆ ಗಮನಕೊಡುತ್ತಿರುವವರೆಗೆ ಶಾಂತಿಯೊಂದು ಕನಸು ಮಾತ್ರ"** – ಎಂದರು ನಮ್ಮ ಪೂರ್ವಜರಾದ ಆರ್ಷವಿಕಾಸವಾದಿಗಳು. ವಿಜ್ಞಾನಿ ಪ್ರಕೃತಿಗೇನೋ ಮೂಗು ದಾರ ಹಾಕಿ ಹಿಡಿದ; ಆದರೆ ತನ್ನನ್ನು ತಾನು ಹಿಡಿತದಲ್ಲಿಟ್ಟುಕೊಳ್ಳಲಾರದೇ ಹೋದ. ಅಂತರಂಗ ಕುಂಠಿತವಾಗಿ, ಬಹಿರಂಗ ಬೆಳೆದರೆ, ಅದರ ಪರಿಣಾಮ ಕಹಿಯೇ ಆಗಬೇಕು. ತನ್ನನ್ನು ತಾನು ವಶದಲ್ಲಿಟ್ಟುಕೊಳ್ಳಲಾರದವನು, ಬೇರೆಯವರ ಮೇಲೆ ಅಧಿಕಾರವೇನು ನಡೆಯಿಸಬಲ್ಲನು? ಹೆಂಡ ಕುಡಿದು ಪ್ರಜ್ಞೆ ಕಳೆದುಕೊಂಡ ಸಾರಥಿಯ ಕೈಗೆ, ಎಂಥ ಸೊಗಸಾದ ಮೋಟಾರನ್ನು ಕೊಟ್ಟರೆ ತಾನೇ ಏನು? ಅದರ ಪರಿಣಾಮ ಇತಿ – ಮಿತಿಗಳನ್ನೂಹಿಸಲು ಪ್ರಗಲ್ಭ ಮೇಧಾವೀ ಕಪಿಲ – ಕಣಾದರಂತಹ ತತ್ವಜ್ಞರೇ ಬರಬೇಕೆ?

ಅಂತರಂಗ ಬಹಿರಂಗಗಳ ಸಮನ್ವಯವೇ ಶಾಂತಿ ಸಾಧನವೆಂದು ನಮ್ಮ ಋಷಿ – ಮುನಿಗಳು ಸಾರಿದರು. ಬಹಿರಂಗ ವಿಕಾಸದ ಅಸಂಖ್ಯ

ಉದಾಹರಣೆಗಳನ್ನು ವಿಜ್ಞಾನಿಗಳು ಇಂದು ನಮ್ಮೆದುರಿಗಿಟ್ಟಿದ್ದಾರೆ. ನಮ್ಮೆಲ್ಲರ ಬಹಿರಂಗವಾದ ಪ್ರಕೃತಿಯ ಒಂದು ಪರಮಾಣುವೂ ಸಹ ಹೇಯವಲ್ಲ; ಆದಕಾರಣ, ಯಾವ ವೈಜ್ಞಾನಿಕ ಆವಿಷ್ಕಾರವೂ ಸಹ ಪರಿತ್ಯಜನೀಯವಲ್ಲ. ಆದರೆ ಪ್ರಬಲ ಹಾಗೂ ಪ್ರಬುದ್ಧವಾದ ಅಂತರಂಗವೇ ಪ್ರಚಂಡ ಬಹಿರಂಗವನ್ನು ವಶದಲ್ಲಿಟ್ಟುಕೊಳ್ಳಬಲ್ಲದೆಂಬುದನ್ನು ಮರೆತಾಗಲೇ ಮಾನವನ ಶಾಂತಿ ಮಣ್ಣು ಪಾಲಾಗುತ್ತದೆ. ಹಾಗಾದರೆ, ಅಂತರ್ವಿಕಾಸ ಅಥವಾ ಉಪನಿಷತ್ಕಾರರ 'ಭೂಮಾ'ದ ಸ್ವರೂಪವೇನು? ಉಪನಿಷತ್ಕಾರರೇ ವರ್ಣಿಸಿದ್ದಾರೆ :—

> **ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ । ಅಥ ಯತ್ರಾನ್ಯತ್ಪಶ್ಯತಿ, ಅನ್ಯಚ್ಛೃಣೋತಿ, ಅನ್ಯದ್ವಿಜಾನಾತಿ ತದಲ್ಪಂ । ಯೋ ವೈ ಭೂಮಾ ತದಮೃತಂ, ಅಥಯದಲ್ಪಂ ತನ್ಮರ್ತ್ಯಂ ॥** [ಛಾಂ. ಉ. ಅ-೭, ಖಂಡ-೨೪]

"ಯಾವ ಸ್ಥಿತಿಯಲ್ಲಿ 'ಬೇರೆ' ಎಂದು ಯಾರನ್ನೂ ನೋಡುವುದಿಲ್ಲವೋ 'ಬೇರೆ' ಎಂಬ ಬಗೆಯಿಂದ ಯಾರ ಬಗ್ಗೆಯೂ ಕೇಳುವುದಿಲ್ಲವೋ, ಯಾರನ್ನೂ 'ಬೇರೆ' ಎಂದು ತಿಳಿಯುವುದಿಲ್ಲವೋ, ಅದೇ ಭೂಮಾ ಅಥವಾ ಅಂತರ್ವಿಕಾಸ. ಯಾವ ಸ್ಥಿತಿಯಲ್ಲಿ ಬೇರೆಯದೆಂಬ ದೃಷ್ಟಿ, ಶ್ರವಣ ಮತ್ತು ಜ್ಞಾನವಿರುತ್ತದೋ, ಅದು ಅಲ್ಪ ಅಂದರೆ ಹ್ರಾಸ. ಭೂಮಾ ಅಂದರೆ ವಿಕಾಸವು ಅಮೃತವಾದುದು; ಅಲ್ಪವು ಸಾವಿಗೆ ತುತ್ತಾಗುವಂತಹುದು."

ಈ ಸ್ವರೂಪವನ್ನುಳ್ಳ ಅಂತರ್ವಿಕಾಸ ಸಿದ್ಧಿಸದೆ, ಕೇವಲ ಬಹಿರ್ವಿಕಾಸವನ್ನೇ ಸಾಧಿಸಿಕೊಂಡಲ್ಲಿ, ಸಾಧನವೇ ಸಾಧಕನಿಗಿಂತ ಪ್ರಬಲವಾಗಿ. ಹದಗೆಟ್ಟ ಮಹಾಯಂತ್ರದಂತೆ, ವಿನಾಶದ ಕಡೆಗೊಯ್ಯುವುದು ಖಂಡಿತ. ಈಗಿನ ವಿಕಾಸ ಕೇವಲ ಪ್ರಾಕೃತಿಕ; ಆದಕಾರಣ ಬಹಿರ್ಮುಖವಾದುದು. ಅದನ್ನು ಹತೋಟಿಯಲ್ಲಿಟ್ಟುಕೊಳ್ಳಲು ಸಮರ್ಥವಾದ ಆತ್ಮಿಕ ವಿಕಾಸ ಅದೇ ಪ್ರಮಾಣದಲ್ಲಿ ಕೂಡಿಬರಬೇಕು. ಮೇಲೆ ಹೇಳಿರುವಂತೆ, ಆ ಆತ್ಮ ವಿಕಾಸ, ತನ್ನದು-ಪರರದು ಎಂಬ ರಾಕ್ಷಸೀ ಭಾವನೆಯ ತಲೆ ಮೆಟ್ಟಿ ನಿಲ್ಲುವಂತಹುದಾಗಿರು

ತ್ತದೆ. ಭಗವದ್ಗೀತೆಯ ಭಾಷೆಯಲ್ಲಿ ಅದನ್ನೇ 'ಆತ್ಮೌಪಮ್ಯದೃಷ್ಟಿ'ಯೆಂದು ಕರೆದಿದ್ದಾರೆ. ಶ್ರೀಕೃಷ್ಣನು ಸ್ಫುಟವಾಗಿ ಹೇಳಿದ್ದಾನೆ:-

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋಮತಃ ॥**

[ಗೀತಾ ಅಧ್ಯಾಯ ೬, ಶ್ಲೋಕ-೩೨]

"ಸುಖವಾಗಲಿ, ದುಃಖವಾಗಲಿ, ಎಲ್ಲೆಡೆಯೂ, ಎಲ್ಲರನ್ನೂ ತನ್ನಂತೆಯೇ ಎಂದು ತಿಳಿದು ಸಮಭಾವವನ್ನಿಡುವವನೇ ಪರಮಯೋಗಿ." ಅಂತರ್ವಿಕಾಸದ ಸ್ವರೂಪ ಇದರಿಂದ ಮತ್ತೂ ಸ್ಫುಟವಾಗುತ್ತದೆ; ಸ್ಪಷ್ಟವಾಗುತ್ತದೆ. ಆತ್ಮೌಪಮ್ಯ ದೃಷ್ಟಿಯೇ ಅಂತರ್ವಿಕಾಸದ ಲಕ್ಷಣ.

ವಿಕಾಸವಾದ ಎಂಬುದು ನೂತನ ಶಬ್ದಶೈಲಿ; ಆರ್ಷ ಶೈಲಿಯಲ್ಲಿ ಅದನ್ನೇ ಯೋಗವೆನ್ನುತ್ತಾರೆ. ಯೋಗಶಬ್ದ ಸಿದ್ಧಿಸುವುದು 'ಯುಜ್' ಧಾತುವಿನಿಂದ. ಯುಜ್ ಎಂದರೆ ಜೋಡಿಸು, ಕೂಡಿಸು, ಸೇರಿಸು= ಎಂದು ಅರ್ಥ. ಅಂದರೆ ಜೀವಾತ್ಮನು ತನ್ನನ್ನು 'ವಿರಾಟ್'ನಲ್ಲಿ ಒಂದು ಗೂಡಿಸುವ ಕ್ರಿಯೆಯೇ ಯೋಗ. ಅದರ ಸ್ವರೂಪ ಅಥವಾ ಸಾಧನ ಆತ್ಮೋಪಮತ್ವ —ಎಲ್ಲರನ್ನೂ ತನ್ನಂತೆ ತಿಳಿಯುವುದು. ಇದರಿಂದ ಯೋಗವು ಕ್ರಿಯಾತ್ಮಕ ವಿಕಾಸವಾದವೆಂಬುದು ಗೊತ್ತಾಗುತ್ತದೆ. ಎಲ್ಲರ ಸುಖ–ದುಃಖಗಳಲ್ಲಿ ತನ್ನ ಸುಖ–ದುಃಖಗಳನ್ನು ಎಲ್ಲರ ಬಾಳಿನಲ್ಲಿ ತನ್ನ ಬಾಳನ್ನು ವಿಲೀನಗೊಳಿಸುವುದೇ ಅಂತರ್ವಿಕಾಸದ ಗುರಿ. ಈ ಗುರಿಯನ್ನು ಮರೆತ ಬಹಿರ್ವಿಕಾಸ ನಾಶಕಾರಿಯಾಗಿ ಪರಿಣಮಿಸುವುದೆಂಬುದನ್ನು ಇಂದಿನ ಜಗತ್ತಿನ ಇತಿಹಾಸದಲ್ಲಿ ಸಾರಿ ಹೇಳುತ್ತಿದೆ.

ಬಾಹ್ಯದೃಷ್ಟಿಯಿಂದ ಏಳಿಗೆಯ ಹಾದಿಯಲ್ಲಿ ಅಡ್ಡ ನಿಲ್ಲುವ ಶಕ್ತಿಗಳನ್ನು ಎದುರಿಸಲು ಪದಾರ್ಥವಿಜ್ಞಾನಕಾಮ್ಯ ಮಾತ್ರವಲ್ಲ; ಅನಿವಾರ್ಯವೇ ಸರಿ. ಆದರೆ, ಅಂತರ್ದೃಷ್ಟಿಯಿಂದ, ವಿಕಾಸದ ಹಾದಿಗೆ ಅಡ್ಡಹಾಕುವ ಆಸುರೀ ಭಾವನೆಗಳನ್ನು ಬಲಿಹಾಕಲು ಆಧ್ಯಾತ್ಮಿಕ ವಿಜ್ಞಾನವೂ ಅನಿವಾರ್ಯವೇ.

ದೋಷಯುಕ್ತವಾದ ಅಂತರಂಗವನ್ನುಳ್ಳವನು, ಬಾಹ್ಯದೃಷ್ಟಿಯಿಂದಲೂ ನಿರ್ದೋಷನಾಗಲಾರನು. ಆದುದರಿಂದ, ಇಷ್ಟು ವಿವೇಚನೆಯಾದ ಮೇಲೆ, ಪ್ರಕೃತಿ ವಿಜಯದ ಫಲ ಸಿದ್ಧಿಯಾಗಬೇಕಾದರೆ, ಶಾಂತಿ ಲಭಿಸಬೇಕಾದರೆ, ಆತ್ಮ ವಿಜಯವೂ ಸಹ ಅನಿವಾರವ್ಯೆಂಬುದು ಚೆನ್ನಾಗಿ ಗೊತ್ತಾಗುತ್ತದೆ. ತನ್ನನ್ನು ತಾನು ಗೆಲ್ಲಲಾರದವನು. ಬೇರೆ ಲಕ್ಷಾಂತರ ಜನರ ಮೇಲೆ ದರ್ಪ ದಿಂದ ಅಧಿಕಾರ ನಡೆಸಿದರೂ ಸಹ, ಆ ಬಡಪಾಯಿ ಅಸಹಾಯನಾಗಿಯೇ, ದೀನನಾಗಿಯೇ ಉಳಿದು ಹೋಗುತ್ತಾನೆ; ಕೊನೆಗೆ ಅಳಿದು ಹೋಗುತ್ತಾನೆ. ಹೆಚ್ಚೇನು? ಶ್ರೀಕೃಷ್ಣನಿಗಿಂತ ಚೆನ್ನಾಗಿ ಆತ್ಮವಿಜಯದ ಫಲವನ್ನು ಬಣ್ಣಿಸಲು ನಮ್ಮ ಬಳಿ ಶಬ್ದಗಳಿಲ್ಲ. ಶ್ರೀ ಕೃಷ್ಣನೇ ಹೇಳಿದ್ದಾನೆ:–

**ಬಂಧುರಾತ್ಮಾಽಽತ್ಮನಸ್ತಸ್ಯ ಯೇನಾತ್ಮೈವಾತ್ಮನಾಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥**

[ಗೀತಾ ಅಧ್ಯಾಯ--೬ ಶ್ಲೋಕ_೬]

"ಯಾವನು ತನ್ನ ಸ್ವಂತ ಯತ್ನದಿಂದ ತನ್ನನ್ನು ತಾನೇ ಗೆದ್ದುಕೊಂಡಿದ್ದಾನೋ, ಅವನಿಗೆ ಅವನೇ ಬಂಧುವು. ಹಾಗಿಲ್ಲದೆ, ತನ್ನ ಮೇಲೆ ತನಗೇ ಹಿಡಿತವಿಲ್ಲದೆ ಹೋದರೆ, ತನಗೆ ತಾನೇ ಶತ್ರುವಾಗಿ ವರ್ತಿಸುತ್ತಾನೆ." ಇನ್ನೇನು ಹೇಳಲಾದೀತು? ಆತ್ಮವಿಜಯಿಯಾದವನು ಜಗದ್ವಿಜಯಿಯೇ ಆಗಿ ಹೋಗುತ್ತಾನೆ. ಹೊರಗಿನವರ ಶತ್ರುತ್ವವನ್ನು ಹೇಗಾದರೂ ನಿವಾರಿಸಬಹುದು; ಆದರೆ ಒಳಗಿನ ಶತ್ರುಗಳನ್ನು ಬಲಿಹಾಕುವುದು ಅತಿ ಪ್ರಯಾಸದ ಕೆಲಸ. ಒಳಗಿನ ಅರಿಗಳನ್ನು ಹಾಗೆಯೇ ಉಳಿಸಿಕೊಂಡು, ಹೊರಗಿನ ಶತ್ರುಗಳನ್ನು ಮರ್ದಿಸಲು ಹೊರಟರೆ, ಒಳಗಿನ ಶತ್ರುಗಳು ಒಳ್ಳೆಯ ಸಮಯದಲ್ಲಿ ಕೈಕೊಟ್ಟುಬಿಡುತ್ತಾರೆ. ನಮ್ಮ ಕೈಯಲ್ಲಿರಬೇಕಾದ ನಾಯಕತ್ವ ಅಂತಃ ಶತ್ರುಗಳ ಕೈಗೆಹೋಗಿ, ನಮ್ಮನ್ನು ಅವರು ವಿನಾಶದ ಹಾದಿಗೆಳೆದೊಯ್ಯುತ್ತಾರೆ. ಆದುದರಿಂದ, ಅಂತಃ ಶತ್ರುಮರ್ದನ ಮೊದಲಾಗಬೇಕಾದ ಕಾರ್ಯ. ಅದಕ್ಕಾಗಿಯೇ ಒಬ್ಬ ವೈದಿಕನು ಜಗದೀಶ್ವರನಲ್ಲಿಡುವ ಮೊರೆಯಿದು:–

**ಮಾ ಪ್ರಗಾಮ ಪಥೋವಯಂ ಮಾ ಯಜ್ಞಾದಿಂದ್ರ ಸೋಮಿನಃ । ಮಾಂತಃಸ್ಥುರ್ನೋ ಅರಾತಯಃ ॥**

[ಋ. ಮಂ.–೧೦, ಸೂ–೫೭, ಮಂ.–೧]

“ಹೇ ಇಂದ್ರದೇವ! ಹೇ ಪರಮಶಕ್ತಿ ಸಂಪನ್ನ ಜಗತ್ಪತೇ! ಐಶ್ವರ್ಯ ಶಾಲಿಗಳಾದ ನಾವು ಯಜ್ಞದ ಪವಿತ್ರ ಮಾರ್ಗದಿಂದ ಚ್ಯುತರಾಗದಿರೋಣ. ನಮ್ಮ ಅಂತರಂಗದಲ್ಲಿ ಶತ್ರುಗಳಿಲ್ಲದಿರಲಿ.”

ಎಲ್ಲವನ್ನೂ ಬಿಟ್ಟು. ಕಾಡಿಗೆ ಓಡಿ ಹೋಗಬೇಕೆಂಬುದು ವೈದಿಕ ಆದರ್ಶವಲ್ಲ. ಚತುರ್ಥಾಶ್ರಮಿಯಾದ ಸಂನ್ಯಾಸಿಗೆ ಸರ್ವಸ್ವ ತ್ಯಾಗದ ಆದೇಶ ವಿರುವುದಾದರೂ ಸಹ, ಸಾಮಾನ್ಯ ಜನತೆಗೆ ಅದು ಆದರ್ಶವಲ್ಲ. ಐಶ್ವರ್ಯ ಸಂಪಾಧನೆ ಕರ್ತವ್ಯವೇ ಸರಿ. ಆದರೆ, ಆ ಐಶ್ವರ್ಯ. ರಾಶಿಹಾಕಿ, ಜಗತ್ತಿನಲ್ಲಿ ವಿಷಮತೆ ಉಂಟುಮಾಡುವುದಕ್ಕಾಗಿಯಲ್ಲ. ಜಗದ್ವಿಕಾಸಕ್ಕಾಗಿ ಮಾತ್ರ ಆಗಿರಬೇಕು. ನಮ್ಮ ಅಶ್ವರ್ಯ ಸಂಪಾದನೆ, ನಮ್ಮನ್ನು ಯಜ್ಞದಿಂದ ದೂರ ತಳ್ಳಬಾರದು. ಯಜ್ಞದ–ಪರೋಪಕಾರದ ಪವಿತ್ರ ವಿಸ್ತಾರಕ್ಕಾಗಿಯೇ “ನಮ್ಮ ಐಶ್ವರ್ಯ ಮೀಸಲಾಗಿರಬೇಕು. ಈ ವೇದಾದೇಶವನ್ನೇ ಕೇಳಿರಿ:–

**ಶತಹಸ್ತ ಸಮಾಹರ ಸಹಸ್ರಹಸ್ತ ಸಂಕಿರ । ಕೃತಸ್ಯ ಕಾರ್ಯ–ಸ್ಯೇಹ ಸ್ಫಾತಿಂ ಸಮಾವಹ ॥** [ಅ. ಕಾಂ. ೩, ಸೂ. ೨೪, ಮ. ೫

“ನೂರು ಕೈಗಳಿಂದ ಸಂಪಾದಿಸು; ಸಾವಿರ ಕೈಗಳಿಂದ (ವಿಧದಿಂದ) ಹಂಚಿಬಿಡು. ಈ ರೀತಿ ನೀನು ಮಾಡಿದ ಕಾರ್ಯದ ವಿಸ್ತಾರವನ್ನು–ವಿಕಾಸವನ್ನು–ಕೈಗೂಡಿಸಿಕೋ.” ಅನಾವಶ್ಯಕವಾದ ಅರ್ಥ ಸಂಚಯದಿಂದ ಭಯಂಕರವಾದ ವಿಪ್ಲವಗಳಾಗುವುವು; ರಕ್ತಪಾತವಾಗುವುದು. ಅದೇ ವಿಕಾಸದ ಸಲುವಾಗಿ ಹಂಚಿಹೋದರೆ, ಮಧುರ ಶಾಂತಿ ನೆಲೆಗೊಳ್ಳುವುದು.

ಈ ರೀತಿ, ಪದಾರ್ಥ ವಿಜ್ಞಾನದಿಂದ ಲಭಿಸಿದ ಸಂಪತ್ತನ್ನು ಸರ್ವ ವಿಕಾಸಕ್ಕಾಗಿ ಉಪಯೋಗಿಸುವ ಸಾಮರ್ಥ್ಯ ಬರಬೇಕಾದರೆ, ಅಧ್ಯಾತ್ಮ

ವಿಜ್ಞಾನ ಅನಿವಾರ್ಯ. ಪ್ರಕೃತಿ ವಿಷಯದ ಮಧುರ ಪರಿಣಾಮ ಸಿಕ್ಕಬೇಕಾದರೆ, ಆತ್ಮ ವಿಜಯ ಅನಿವಾರ್ಯ; ಆತ್ಮವಿಜಯವೆಂದರೆ, ತನ್ನಲ್ಲಿನ ಬಾಧಕ ಮನೋವೃತ್ತಿಗಳನ್ನೆಲ್ಲಾ ಬಲಿಹಾಕುವುದು. ಆತ್ಮ ವಿಜಯವಿಲ್ಲದ ಪ್ರಕೃತಿ ವಿಜಯ ಮಹಾ ಪ್ರಳಯಕಾರಿ, ಆ ಆತ್ಮ ವಿಜಯದ ಗುಟ್ಟನ್ನರಿಯುವುದೇ ಈ ನಮ್ಮ ಕಿರುಹೊತ್ತಿಗೆಯ ಉದ್ದೇಶ್ಯ.

೨

## ಮಾನವ ಸಾಮಾಜಿಕ ಜೀವ

ಕೇವಲ ತಿನ್ನುವುದು-ಕುಡಿಯುವುದು, ನಿದ್ರಿಸುವುದು, ಎಚ್ಚರಗೊಳ್ಳುವುದು, ಹೆದರುವುದು-ಪ್ರೀತಿಸುವುದು, ಸಂತಾನೋತ್ಪಾದನೆ-ಈ ವಿಷಯಗಳಲ್ಲಿ ಮಾತ್ರವೇ ಅಲ್ಲ; ಗುಂಪುಕಟ್ಟಿ ಜೀವಿಸುವುದರಲ್ಲಿಯೂ ಮಾನವನು ಇತರ ಪಶುಗಳನ್ನೇ ಹಿಂಬಾಲಿಸುತ್ತಾನೆ. ಇರುವೆಯಂತಹ ಅಲ್ಪ ಜೀವದಿಂದ ಹಿಡಿದು, ಆನೆಯಂತಹ ಬೃಹಜ್ಜೀವದ ವರೆಗೆ-ಪಕ್ಷಿಗಳೇನು ಈ ನಿಯಮಕ್ಕೆ ಹೊರತಲ್ಲ-ಸಮಸ್ತ ಪ್ರಾಣಿಗಳೂ ಗುಂಪುಕಟ್ಟಿ ಜೀವಿಸುವುದನ್ನೇ ನಾವು ಈ ವಿಶ್ವದಲ್ಲಿ ಕಾಣುತ್ತೇವೆ. ವಸ್ತುತಃ ಸಂಯೋಗವೇ ಸೃಜನ; ವಿಯೋಗವೇ ಪ್ರಳಯ. ಆದುದರಿಂದ ಕೂಡಿಬಾಳುವುದೇ ಸೃಷ್ಟಿ ನಿಯಮ. ಜೀವರ ಸ್ವಾಭಾವಿಕ ಪ್ರವೃತ್ತಿ ಕೂಡಿ ಬಾಳುವುದೇ ಆಗಿರುತ್ತದೆ. ಮಾನವನೂ ಸಹ ಕೂಡಿ ಬಾಳಬಯಸುತ್ತಾನೆ. ಕೂಡಿ ಬಾಳುವ ಒಲವು ಪಶುಪಕ್ಷಿಗಳಂತೆಯೇ ಮಾನವನಿಗೂ ಸಹಜ. ಹೆಚ್ಚೇನು? ಮಾನವರಲ್ಲಿ ಕಂಡು ಬರುವ ಧರ್ಮಾಧರ್ಮ ವಿವೇಚನೆ, ಸುಕೃತದುಷ್ಕೃತ ಭಾವನೆ-ಇದರ ತಳಹದಿಯೇ ಸಾಮಾಜಿಕ ಜೀವನವಾಗಿರುತ್ತದೆ. "ನನಗೆ ಯಾರ ಹಂಗೂ ಬೇಡ; ನನ್ನ ಪಾಡಿಗೆ ನಾನು, ಯಾರೊಂದಿಗೂ ಯಾವ ವ್ಯವಹಾರವನ್ನೂ ಇಟ್ಟುಕೊಳ್ಳದೆ, ಸರ್ವಥಾ ಏಕಾಕಿಯಾಗಿ ಇದ್ದುಬಿಡುತ್ತೇನೆ"-ಎನ್ನುವವನಿಗೆ ಧರ್ಮಾಧರ್ಮ ವಿವೇಚನೆಯ ಆವಶ್ಯಕತೆಯೇ ಇಲ್ಲ. ಏಕೆಂದರೆ-ಒಳಿತನ್ನಾಗಲೀ, ಕೇಡನ್ನಾಗಲೀ ಮಾಡಲೂ ಇತರ ಜೀವಾತ್ಮರ ಸಂಪರ್ಕವಿರಬೇಕಾಗುತ್ತದೆ. ಯಾರೊಂ

ದಿಗೂ ವ್ಯವಹರಿಸದೆ, ಪೂರ್ಣತಃ ಏಕಾಂತ ವಾಸಿಯಾಗಿರಲು ಸಾಧ್ಯವೇ? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುವುದು ಅಷ್ಟು ಸುಲಭವಲ್ಲ; ಸಾಧ್ಯವೆಂದು ಒಪ್ಪಿಕೊಳ್ಳುವುದಾದರೆ, ಅವನಿಗೆ ಧರ್ಮಾಧರ್ಮ ವಿವೇಚನೆಯೂ ಅನಾವಶ್ಯಕವೆಂದು ಹೇಳಬಹುದು. ಯಾವುದನ್ನು ನಾವು 'ಪಾಪ' ಎಂಬ ಹೆಸರಿನಿಂದ ನಿರ್ದೇಶಿಸುತ್ತೇವೋ, ಅದರ ಸಂಸ್ಕಾರ ಮಾತ್ರ ನಮ್ಮ ಆತ್ಮಗಳಲ್ಲುಳಿದು, ಅದರ ನೇರವಾದ ಪರಿಣಾಮ ಅನ್ಯರ ಮೇಲಾಗುವುದನ್ನು ನಾವು ದಿನದಿನವೂ ನೋಡುತ್ತಿಲ್ಲವೆ? ಹೌದು. ಇನ್ನೂ ಒಂದು ಸೂಕ್ಷ್ಮವಾದವಿದೆ. ತನಗೆ ತಾನೇ ಹಿಂಸೆ ಕೊಟ್ಟುಕೊಳ್ಳಲು ಸಾಧ್ಯವಿಲ್ಲವೇ? ತನ್ನನ್ನು ತಾನೇ ವಂಚಿಸಿಕೊಳ್ಳಲು ಸಾಧ್ಯವಿಲ್ಲವೆ? ತನ್ನನ್ನು ತಾನೇ ಮೋಸಕ್ಕೆ ಗುರಿಪಡಿಸಿಕೊಳ್ಳಲು ಸಾಧ್ಯವಿಲ್ಲವೆ? ಹೀಗಿರುವಾಗ ಪಾಪಮಾಡಲು ಇನ್ನೊಂದು ಜೀವದ ಅವಶ್ಯಕತೆ ಏನಿದೆ? ಎಂಬ ಪಕ್ಷವೂ ಇದೆ. ಸೂಕ್ಷ್ಮವಾಗಿ ಆಲೋಚಿಸಿದರೆ, ಯಾವ ಪಾಪವನ್ನು ನಾವು ನಮ್ಮ ಮೇಲೆಯೇ ಮಾಡಿಕೊಳ್ಳುತ್ತೇವೆಂದು ಭಾವಿಸುತ್ತೇವೋ, ಅದರ ಪರಿಣಾಮವನ್ನೂ ಸಹ ನಮ್ಮ ಸಮಾಜವೇ ಅಥವಾ ರಾಷ್ಟ್ರವೇ ಉಣ್ಣಬೇಕಾಗುವುದೆಂಬುದು ಗೊತ್ತಾಗುತ್ತದೆ. ಉದಾಹರಣೆಗೆ, ಒಬ್ಬನು ಉಪವಾಸಮಾಡಿಯೋ ಅಥವಾ ತನ್ನ ಶರೀರದ ಮೇಲೆಯೇ ಬ್ರಹ್ಮಚರ್ಯ ಘಾತಕವಾದ ಯಾವುದೋ ಒಂದು ಪ್ರಯೋಗ ನಡೆಸಿಯೋ ದುರ್ಬಲನಾಗುತ್ತಾನೆಂದು ಭಾವಿಸೋಣ. ಅವನ ದೌರ್ಬಲ್ಯ ಅವನ ಸ್ವತ್ತು ಮಾತ್ರವಲ್ಲ; ಸಮಾಜಕ್ಕೆ ಅವನ ಕಡೆಯಿಂದ ಬರಬೇಕಾಗಿದ್ದ ಬಲದ ಆ ಪ್ರಮಾಣ ಕುಗ್ಗಿ. ಅವನು ಸಮಾಜದ ಬಲಕ್ಕೇ ಆ ಮಟ್ಟಿಗೇ ಕಂಟಕಪ್ರಾಯನಾಗುತ್ತಾನೆ. ಅನ್ಯರ ಮೇಲೆ ಅವನ ಪಾಪದ ಹೊರೆ ಬಿದ್ದಿತೋ ಇಲ್ಲವೋ? ಆದಕಾರಣ, ಕೆಟ್ಟದನ್ನಾಗಲೀ, ಒಳ್ಳೆಯದನ್ನಾಗಲೀ ಮಾಡಬೇಕಾದರೆ ಗುಂಪುಕೂಡಿದ ಬಾಳು ಸಾಮಾಜಿಕ ಜೀವನ ಅನಿವಾರ್ಯವೆಂಬುದು ಸ್ಪಷ್ಟವಾಗುತ್ತದೆ. ಹೆಚ್ಚೇನು ಹೇಳೋಣ? ಪ್ರಕೃತಿಯ ಪರಮಾಣುಗಳು ಪರಸ್ಪರ ಸೇರಿರುವುದರಿಂದ ಜಗತ್ತು ನಡೆಯುತ್ತಿದೆ; ಪರಮಾಣು ಘಟಕಗಳನ್ನು ಒಡೆದರೆ, ಅದರಿಂದ ಆಟಂಬಾಂಬಿನಂತಹ ಘಾತಕಶಕ್ತಿಯೇ ಉದ್ಭವಿಸುತ್ತದೆ. ಜಗತ್ತಿನ ಪ್ರತಿಯೊಂದು ಘಟನೆಯೂ ನಮಗೆ ಏಕೀಕರಣದ ಪಾಠವನ್ನೀಯುತ್ತದೆಯೇ ಹೊರತು, ಏಕಾಂತವಾಸದ ಪಾಠವನ್ನು ಕಲಿಸು

ತ್ತಿಲ್ಲ. ಸೂರ್ಯ ಚಂದ್ರ, ನಕ್ಷತ್ರ, ಪರ್ವತ, ಸಾಗರ-ಎಲ್ಲವೂ ಅಣುವಿನಿಂದ ಮಹತ್ತಾಗಿವೆಯೋ ಹೊರತು; ಬೇರೆ ರೀತಿಯಲ್ಲಿ ಅದಕ್ಕೆ ಅಸ್ತಿತ್ವವಿಲ್ಲ. ಮಾನವನೂ ಈ ವಿಶಾಲ ವಿಶ್ವದ ಒಂದು ತುಣುಕೇ ಆಗಿರುವುದರಿಂದ, ಅವನು ಈ ಸಂಯೋಗಧರ್ಮಕ್ಕೆ ವಿರುದ್ಧವಾಗಿ ನಡೆಯಲಾರ. ನಮ್ಮ ಧರ್ಮ ಗ್ರಂಥಗಳಾದ ವೇದಗಳ ಆದೇಶವಾದರೂ ಏಕಾಂತವಾಸವಲ್ಲ. ಏಕೀಕೃತವಾಸ. ಸಂಸಾರವೆಂಬ ಮಹಾನದಿಯನ್ನು ಕುರಿತು ವೇದ ಹೇಳುತ್ತದೆ:-

**ಅಶ್ಮನ್ವತೀ ರೀಯತೇಸಂರಭಧ್ವಂ ಉತ್ತಿಷ್ಠತ ಪ್ರತರತಾ**
**ಸಖಾಯಃ । ಅತ್ರಾಜಹಾಮಯೇ ಅಸನ್ನಶೇವಾ ।**
**ಶಿವಾನ್ವಯಮುತ್ತರೇಮಾಭಿವಾಜಾನ್ ॥**

[ಋಗ್ವೇದ ಮ. ೧೦, ಸೂ. ೫೩, ಮಂತ್ರ ೮

"ದೊಡ್ಡ ದೊಡ್ಡ ವಿಪತ್ತುಗಳೆಂಬ ಕಲ್ಲು ಗುಂಡುಗಳಿಂದ ತುಂಬಿದ ಈ ಜಗನ್ನದಿ ಹರಿಯುತ್ತಿದೆ. ಮಿತ್ರರೇ! ಒಟ್ಟಾಗಿರಿ! ಏಳಿರಿ! ದಾಟಿರಿ! ಇಲ್ಲಿಯೇ ಕೆಟ್ಟದನ್ನೆಲ್ಲಾ ಬಿಟ್ಟು ಬಿಡೋಣ. ಒಳ್ಳೆಯದನ್ನು ಮಾತ್ರ ಹಿಡಿದು ಪಾರಾಗೋಣ." ಇದರಲ್ಲಿ ಏಕಾಂತ ಜೀವನವೆಲ್ಲಿದೆ? **ಸಂರಭಧ್ವಂ! ಸಂರಭಧ್ವಂ !! ಸಂರಭಧ್ವಂ !!!**"—ಒಟ್ಟಾಗಿ ದುಡಿಯಿರಿ; ಒಟ್ಟಾಗಿ ದುಡಿಯಿರಿ" ಎಂಬ ದಿವ್ಯ ಸಂದೇಶವಿದೆ. **ಏಕಾಂತ ಜೀವನವಲ್ಲ; ಏಕೀಕೃತ ಜೀವನದ ಆದೇಶವಿದೆ.** ಸಮಾಜ ಸಂಘಟನದ ಬೋಧನೆಯಿದೆ. ಯಜುರ್ವೇದದ ಧ್ವನಿಯನ್ನಾದರೂ ನೋಡಿರಿ:-

**ಯಸ್ಮಿನ್ಸರ್ವಾಣಿಭೂತಾನ್ಯಾತ್ಮೈ ವಾಭೂದ್ವಿಜಾನತಃ ।**
**ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥**

[ಯಜು. ಅ. ೪೦, ಮಂತ್ರ ೭]

"ಯಾವ ಜ್ಞಾನಿಯು ತನ್ನಲ್ಲಿಯೇ ಎಲ್ಲ ಜೀವರ ಅಸ್ತಿತ್ವವನ್ನೂ ಅನುಭವಿಸುತ್ತಾನೋ, ಎಲ್ಲರನ್ನೂ ತನ್ನಂತೆಯೇ ಕಾಣುತ್ತಾನೋ, ಆ ಐಕ್ಯ ದರ್ಶಿಯ ಭಾಗಕ್ಕೆ ಮೋಹವಾವುದು? ಶೋಕವಾವುದು?" ಸಜೀವ ಹಾಗೂ

ಸಕ್ರಿಯ ತತ್ವಶಾಸ್ತ್ರ ಇದಕ್ಕಿಂತ ಮುಂದುವರಿಯಲು ಸಾಧ್ಯವಿಲ್ಲ. ಎಲ್ಲರನ್ನೂ ತನ್ನಂತೆ ಕಾಣುವವನಿಗೆ ತಾನು, ಅನ್ಯರು–ಎಂಬ ಮೋಹ ಉಂಟಾಗುವುದಿಲ್ಲ; ಮೋಹವಿಲ್ಲದ ಮೇಲೆ ಶೋಕವೂ ಇಲ್ಲ, ಈ ಏಕೀಕರಣ ವಾದದಲ್ಲಿ, ಸಮಾಜ ಬಾಹಿರ ಏಕಾಂತ ಜೀವನದ ಬುಡಕ್ಕೇ ಕೊಡಲಿ ಪೆಟ್ಟಿದೆ. ಇನ್ನೇನು ಹೇಳೋಣ? ಶಿಖಾ–ಸೂತ್ರ ಬಂಧನದಿಂದ ವಿಮುಕ್ತನಾಗಿ, ಕೇವಲ ನಿರೀಹನೂ ನಿರ್ಮಲನೂ ಆಗಿ, ಗೃಹತ್ಯಾಗಮಾಡಿ ಹೊರಡುವ ಸರ್ವಸ್ವತ್ಯಾಗಿಯಾದ ಸಂನ್ಯಾಸಿಯಿಂದ ಹೇಳಲ್ಪಡುವ ವಾಕ್ಯವಾದರೂ **"ಮತ್ತಃ ಸರ್ವ ಭೂತೇಭ್ಯೋಽ ಭಯಮಸ್ತು"**–ನನ್ನಿಂದ ಸರ್ವ ಜೀವರಿಗೂ ಅಭಯವುಂಟಾಗಲಿ" = ಎಂಬುದೇ ಆಗಿರುತ್ತದೆ. ಈ ವಾಕ್ಯದಲ್ಲಿನ 'ಅಭಯ' ಎಂಬ ಶಬ್ದಕ್ಕೆ– 'ಭಯದ ಅಭಾವ' ಎಂಬ ನಿವೃತ್ತರ್ಥ್ಯವನ್ನು ಗ್ರಹಿಸಿ, "ನಾನು ಸಮಾಜದಲ್ಲಿದ್ದರೆ, ಜನರಿಗೆ ಭಯವುಂಟಾಗುತ್ತದೆ; ಆದುದರಿಂದ, ನಾನು ದೂರ ಓಡಿ ಹೋಗುತ್ತೇನೆ." ಎಂದು ಸಂನ್ಯಾಸಿ ಹೇಳುತ್ತಾನೆ–ಎಂಬ ಭಾವನೆ ಗ್ರಹಿಸಲು ಸಾಧ್ಯವೇ ಇಲ್ಲ. ಏಕೆಂದರೆ, ವೇದ ಯತೀಶ್ವರನಿಗೆ ಅತಿ ಸ್ಪಷ್ಟವಾಗಿ ಹೀಗೆ ಆಜ್ಞೆ ಮಾಡುತ್ತಿದೆ:–

**ಋತಂ ವದನ್ ಋತದ್ಯುಮ್ನ ಸತ್ಯಂ ವದನ್ ಸತ್ಯ ಕರ್ಮನ್।**
**ಶ್ರದ್ಧಾಂ ವದಂತ್ಸೋಮ ರಾಜನ್ ಧಾತ್ರಾ ಸೋಮ ಪರಿಷ್ಕೃತ**
**ಇಂದ್ರಾಯೇಂದೋ ಪರಿಸ್ರವ ॥** [ಋ.-೯. ೧೧೩, ೪]

"ಓ ಸತ್ಯಜ್ಞಾನದ ಬಲದಿಂದ ರಾಜಿಸುವ ಯತಿರಾಜ: ಜ್ಞಾನವನ್ನು ಉಪದೇಶಿಸು, ಓ ಸತ್ಕರ್ಮ ನಿರತನಾದ ಯತೀಶ್ವರ! ಸತ್ಯವನ್ನು ಬೋಧಿಸು. ಓ ಶಾಂತಿಯಿಂದ ಪ್ರಕಾಶಿಸುವ, ಪರಮ ಪ್ರಶಾಂತ ಪರಿವ್ರಾಟ್! ಶ್ರದ್ಧೆಯನ್ನು ತಿಳಿಸು. ಸರ್ವಧರ್ತನಾದ ಪ್ರಭುವಿನ ಸಂಪರ್ಕದಿಂದ ಪವಿತ್ರನಾಗಿ, ಹೇ ಆನಂದದಾಯಕ ಸನ್ಯಾಸಿನ್! ಇಂದ್ರಿಯವಾನ್ ಜೀವನಮೇಲೆ ದಯಾವೃಷ್ಟಿಯನ್ನು ಸುರಿಸು" ಇಷ್ಟು ಸ್ಪಷ್ಟವಾದ ಆದರ್ಶ, ಸಂನ್ಯಾಸಿಯ ಮುಂದಿರುವಾಗ. ಅವನು ಸಮಾಜಬಾಹಿರನಾಗಿ ಓಡಿಹೋಗುವುದಾದರೂ ಎಲ್ಲಿಗೆ?

ಆದುದರಿಂದ, ಮಾನವನು ಸಮಾಜಬಾಹಿರನಾಗಿ ಬಾಳಲಾರನು. ಬಾಳಿದರೂ ವರ್ಚಸ್ಸಿಲ್ಲದೆ. ಅನುಭೂತಿ ರಹಿತವಾದ ಜಡತ್ವದ ಅಂಚನ್ನು

ಸ್ಪರ್ಶಿಸುವ ನಿರರ್ಥಕವಾದ ಬಾಳು ಆದಾದೀತೇ ಹೊರತು, ಆತ್ಮವಿಕಾಸಕ್ಕೆ ಅದು ಸಾಧನವಾಗಲಾರದು ಆದೇ ಕಾರಣದಿಂದ, ವೇದಗಳು ಅತಿ ಸ್ಪಷ್ಟ ವಾಗಿಯೇ ಉಪದೇಶಿಸುತ್ತಿವೆ:-

**ಸಂ ಜಾನೀಧ್ವಂ ಸಂಪೃಚ್ಛಧ್ವಂ ಸಂ ವೋ ಮನಾಂಸಿ ಜಾನತಾಂ।**
**ದೇವಾ ಭಾಗಂ ಯಥಾಪೂರ್ವೇ ಸಂಜಾನಾನಾ ಉಪಾಸತೇ ॥**

[ಅಥರ್ವ-೬, ೬೪, ೧]

"ಜೀವಾತ್ಮರೇ! ವಿದ್ವಾಂಸರೂ, ಅಗ್ರಗಾಮಿಗಳೂ ಆದ ಮಹಾಮಾನ ವರು ತಮ್ಮ ಕರ್ತವ್ಯಭಾಗವನ್ನು ಸೇವಿಸುವಂತೆ. ನೀವೂ ಕೂಡ ಒಬ್ಬರನ್ನೊಬ್ಬರು ಸಂಪರ್ಕ ಬೆಳೆಸಿರಿ. ನಿಮ್ಮ ಮನಸ್ಸುಗಳು ಪರಸ್ಪರ ಅನುಕೂಲವಾಗಿರಲಿ" ಇಷ್ಟು ಸ್ಪಷ್ಟವಾಗಿ ಸಾಮಾಜಿಕ ಜೀವನದ ಆದರ್ಶ ಒಡಮೂಡಿರುವಾಗ, ಬ್ರಹ್ಮಚಾರಿಯೇ ಆಗಲಿ, ಸಂನ್ಯಾಸಿಯೇ ಆಗಲಿ-ಸಮಾಜ ಬಾಹಿರನಾಗಿರಲು ಸಾಧ್ಯವಿಲ್ಲ. ಗೃಹಸ್ಥ-ವಾನಪ್ರಸ್ಥಿಗಳ ಕರ್ತವ್ಯವು ಸಮಾಜದ ನಡುವೆಯೇ ತಾನೆ? ಪ್ರಕೃತಿ ವಿಜಯದ ಸದುಪಯೋಗಕ್ಕೆ ಆತ್ಮವಿಜಯು ಪರಮ ಅನಿವಾರ್ಯವೆಂಬುದನ್ನರಿತೆವು; ಮಾನವನು ಸಾಮಾಜಿಕ ಜೀವಿಯೆಂಬುದನ್ನೂ ತಿಳಿದೆವು, ಸಮಾಜ ಜೀವಿಯಾದ ಮಾನವನು ಆದರ್ಶಮಾನವನಾಗಬೇಕಾದರೆ, ಅವನು ಆತ್ಮವಿಜಯಿಯಾಗಲೇಬೇಕು. ಆತ್ಮ ವಿಜಯದ ಹಾದಿ ಅಧ್ಯಾತ್ಮ ವಾದವೇ ಆದುದರಿಂದ, ಅಧ್ಯಾತ್ಮವಾದದ ಸ್ವರೂಪವನ್ನರಿಯಲು ಪ್ರಯತ್ನಿಸೋಣ.

೩

## ಅಧ್ಯಾತ್ಮವಾದ

ಅಧ್ಯಾತ್ಮವಾದವೆಂದರೆ, ಈ ಲೋಕದ ಯಾವ ವ್ಯವಹಾರಕ್ಕೂ ಸಂಬಂಧಿಸದ ಗೊಡ್ಡು ವೇದಾಂತ-ಎಂಬ ತಿರಸ್ಕಾರ ಭಾವನೆಯೊಂದುಕಡೆ; ಅಧ್ಯಾತ್ಮವಾದ ಸಾಧಾರಣ ಮಾನವರಿಗೆ ಅರ್ಥವಾಗದ, ಸಾಗರಗಳನ್ನೂ,

ಗ್ರಹೋಪಗ್ರಹಗಳನ್ನೂ ಕಲಕಿ, ಮುದುಡಿ ಚೆಲ್ಲಾಡಬಲ್ಲ ಯಾವುದೋ ಅಲೌಕಿಕ ವಿದ್ಯೆ–ಎಂಬ ಅತಿಶಯೋಕ್ತಿ ಪೂರ್ಣವಾದ ಅಂಧಶ್ರದ್ಧಾ ಭಾವನೆಯೊಂದು ಕಡೆ–ಈ ಎರಡು ಭಾವನೆಗಳ ನಡುವೆ ಸಿಕ್ಕಿ, ಇಂಥ ಅಧ್ಯಾತ್ಮವಾದ ಯಾರಿಗೂ ಬೇಡದ ವಿಷಯವಾಗಿದೆ. ಆದರೆ "ನಾನು ಅಧ್ಯಾತ್ಮವಾದವನ್ನರಿಯಲು ಅಸಮರ್ಥನಾಗಿದ್ದೇನೆ; ಲೌಕಿಕ ವಿಷಯುಗಳನ್ನಾದರೆ ಅರಿಯಬಲ್ಲೆ" ಎನ್ನುವುದು. "ನಾನು ಕಣ್ಣಿಗೆ ಕಾಣದುದನ್ನು ನೋಡಬಲ್ಲೆ; ಕಾಣುವುದನ್ನು ನೋಡಲಾರೆ" ಎಂಬಂತೆಯೇ ಇದೆ ಎಂದು ನಾವು ಹೇಳಿದರೆ, ಓದುಗರಿಗೆ ಆಶ್ಚರ್ಯವೇ ಆದೀತು. ಆದರೆ ನಮ್ಮ ಹೇಳಿಕೆ ಕೇವಲ ಶಬ್ದಜಾಲವಲ್ಲ. ಹೀಗೆ ಆಲೋಚಿಸಿ ನೋಡೋಣ. ಜೀವನ ಎಂಬ ಶಬ್ದದ ಅರ್ಥವೇನು? ಚೇತನ ಮತ್ತು ಜಡದ ಸಂಯೋಗವೇ ಅಲ್ಲವೇ ಜೀವನ? ಶರೀರವಂತೂ ಜಡವೇ ಎಂಬುದು ಎಲ್ಲರಿಗೂ ಗೊತ್ತು. ಸೂಕ್ಷ್ಮೇಂದ್ರಿಯಗಳಾದ ಮನಸ್ಸು ಬುದ್ಧಿ, ಚಿತ್ತ, ಅಹಂಕಾರ ಎಲ್ಲವೂ ಜಡವೇ. ಜಡದಲ್ಲಿ ಕ್ರಿಯೆ ಇರಬಾರದು. ಆದರೆ–ಜ್ಞಾನದ ಅಭಾವವನ್ನಲ್ಲದೆ, ಜ್ಞಾನವನ್ನು ನಾವು ಯಾವ ಜಡಪದಾರ್ಥದಲ್ಲಿಯೂ ಕಾಣಲಾರೆವು. ಚೈತನ್ಯ ಎಂಬುದು ಚೇತನದ ಗುಣವೇ ಹೊರತು, ಜಡದ ಗುಣವಲ್ಲ. ಚಾರ್ವಾಕದಾರ್ಶನಿಕರ ತೀರ್ಮಾನದಂತೆ, ಜಡ ತತ್ವಗಳ ಪರಸ್ಪರ ಸಮ್ಮಿಲನದಿಂದ, ಎಂದಿಗೂ ಚೈತನ್ಯ ಮೂಡಲಾರದು ಆದರೆ ಜೀವಿತ ಪ್ರಾಣಿಗಳ ಶರೀರದಲ್ಲಿ ನಾವು ಜ್ಞಾನಸಹಿತವಾದ ಕ್ರಿಯೆಯನ್ನು ಕಾಣುತ್ತೇವೆ. ಇದಕ್ಕೆ ಯಾವ ಜಡವೂ ನಿಮಿತ್ತವಲ್ಲ; ಜ್ಞಾನವೆಂಬುದು ಚೈತನ್ಯದ ಅವಿಭಾಜ್ಯ ಅಂಗ. ಆದುದರಿಂದ, ಜೀವಿತ ಪ್ರಾಣಿಗಳ ಚೈತನ್ಯಕ್ಕೆ ಮತ್ತು ನಿರ್ಜೀವ ಶವಗಳ ಜಡತ್ವಕ್ಕೆ ನಿಮಿತ್ತವಾದ ಯಾವುದೋ ಒಂದು ಚೇತನ ವಸ್ತುವಿರಲೇಬೇಕು ಮತ್ತು ಏಕಕಾಲದಲ್ಲಿ ನಾವು ಹಲವು ಪ್ರಾಣಿಗಳನ್ನು ಸಜೀವಾವಸ್ಥೆಯಲ್ಲಿಯೂ, ಹಲವನ್ನು ನಿರ್ಜೀವಾವಸ್ಥೆಯಲ್ಲಿಯೂ ಕಾಣುತ್ತೇವಾದುದರಿಂದ, ತನ್ನ ಆಗಮನದಿಂದ ಜಡದೇಹದಲ್ಲಿ ಚೈತನ್ಯವನ್ನೂ, ನಿರ್ಗಮನದಿಂದ ಮರಳಿ ಜಡತ್ವವನ್ನೂ ಪ್ರಕಟಿಸುವ ಆ ಚೇತನ ಸರ್ವವ್ಯಾಪಕವಾಗಿರದೆ ಏಕದೇಶಿಯಾಗಿರಬೇಕು; ಒಂದಾಗಿರದೆ ಬಹುವಾಗಿರಬೇಕು" ಎಂಬುದು ಸಿದ್ಧವಾಗುತ್ತದೆ.

ಕಾರಣವೇನೆಂದರೆ, **ಸರ್ವವ್ಯಾಪಕನಾದ ಪರಮಾತ್ಮನೆಂಬ ಚೇತನನೇ ಪ್ರತಿಯೊಂದು ಶರೀರದಲ್ಲಿನ ಚೈತನ್ಯಕ್ಕೂ ನಿಮಿತ್ತನೆಂದು ಭಾವಿಸಿದಲ್ಲಿ ಸರ್ವವ್ಯಾಪಕನ ಆಗಮನ-ನಿರ್ಗಮನಗಳೇ ಅಸಂಭವವಾದುದರಿಂದ, ಯಾವ ಶರೀರವೂ ಎಂದಿಗೂ ನಿರ್ಜೀವವಾಗಿ ಬೀಳುವ ಪರಿಸ್ಥಿತಿಯೇ ಬರಲಾರದು.** ವೇದಗಳಲ್ಲಿ ಸಜೀವತೆ-ನಿರ್ಜೀವತೆಗಳಿಗೆ ನಿಮಿತ್ತನಾದ ಚೇತನದ ಬಗ್ಗೆ ಹೀಗೆ ಹೇಳಿದೆ:-

**ದಂಡಾ ಇವೇದ್ಗೋ ಅಜನಾಸ ಆಸನ್ ಪರಿಚ್ಛಿನ್ನಾ ಭರತಾ ಅರ್ಭಕಾಸಃ। ಅಭವಚ್ಚ ಪುರಏತಾ ವಸಿಷ್ಠ ಆದಿತ್ತೃತ್ಸೂನಾಂ ವಿಶೋ ಅಪ್ರಥಂತ ॥** [ಋಗ್ವೇದ ೭, ೩೩. ೬]

"ಕೋಲುಗಳು ಹಸುವನ್ನು ನಡೆಸುವಂತೆ. ಇಂದ್ರಿಯಗಳನ್ನು ನಡೆಯಿಸುವ ಚೇತನರು ಪರಿಚ್ಛಿನ್ನರು; ದೇಹಗಳನ್ನು ಧರಿಸುವವರು ಮತ್ತು ಅಣುಮಾತ್ರ ಪ್ರಮಾಣವುಳ್ಳ ಸೂಕ್ಷ್ಮರು, ಇವರನ್ನು ಸಂಚಾಲನ ಮಾಡುವವನು ವಾಸಗೊಳಿಸುವವರಲ್ಲೆಲ್ಲಾ ಶ್ರೇಷ್ಠನಾದ, ಸರ್ವಾಧಾರನಾದ ಪರಮಾತ್ಮನು. ಆ ನಂತರವೇ ಅಂತಃಶತ್ರುನಾಶಕರಾದ ಜೀವರ ಪ್ರಜೆಗಳು ವರ್ಧಿಸುತ್ತಾರೆ".

ಈ ರೀತಿ ಜಡವಾದ ಭೌತಿಕ ಶರೀರಗಳಲ್ಲಿ ಪರಮಾತ್ಮನ ಪ್ರೇರಣೆಯಂತೆ ಪ್ರವೇಶಿಸಿ. ಅವಕ್ಕೆ ಚೈತನ್ಯ ನೀಡುವ ಏಕದೇಶಿಗಳಾದ ಚೇತನರನ್ನೇ 'ಆತ್ಮ' ಎನ್ನುತ್ತಾರೆ; ಪರಮಾತ್ಮನು ಎಲ್ಲಕ್ಕೂ ಆತ್ಮ; ಈ ಏಕದೇಶಿಯಾದ ಆತ್ಮ ತಾನು ಧರಿಸುವ ಶರೀರಕ್ಕೆ ಮಾತ್ರ ಆತ್ಮ. ಆದುದರಿಂದ ಪರಮಾತ್ಮನಿಂದ ಈ ಚೇತನವನ್ನು ಪ್ರತ್ಯೇಕಿಸಿ ತೋರಿಸಲು 'ಜೀವಾತ್ಮ' ಎಂಬ ಶಬ್ದದಿಂದ ಇವನನ್ನು ನಿರ್ದೇಶಿಸುತ್ತಾರೆ. ನಾವು 'ಅಧ್ಯಾತ್ಮವಾದ' ಎಂಬ ಶಬ್ದವನ್ನು ಉಪಯೋಗಿಸಿರುವುದು ಈ ಜೀವಾತ್ಮನಿಗೆ ಸಂಬಂಧಪಟ್ಟ ತತ್ತ್ವ-ಎಂಬರ್ಥದಲ್ಲಿಯೇ.

ಜೀವನದಲ್ಲಿ ಆತ್ಮನ ಪಾತ್ರ ಇಷ್ಟು ಮುಖ್ಯವಾಗಿದ್ದು, ದೇಹ, ಕೇವಲ ಒಂದು ಸಾಧನ ಮಾತ್ರವಾಗಿರುವಾಗ, "ನಮಗೆ ಸಾಧನ ಅರ್ಥವಾಗುತ್ತದೆ; ಸಾಧಕನ ಬಗ್ಗೆ ಯೋಚಿಸಲಾರೆವು" ಎಂಬುದೇ ಆಶ್ಚರ್ಯಕರವಲ್ಲವೆ?

ವಸ್ತುತಃ ಆತ್ಮನ ಕಡೆಗೆ ಗಮನವೇ ಹೋಗದಂತಹ ಪರಿಸ್ಥಿತಿ ಉಂಟಾಗಿರುವುದು ಅಧ್ಯಾತ್ಮವಾದದ ಲೋಪದಿಂದಲೇ. ನಿಜವಾಗಿ ನೋಡಿದರೆ ಅಧ್ಯಾತ್ಮವಾದ ಅತಿ ಸುಲಭವಾದ ವಿಷಯ. 'ಅಧಿ' ಮತ್ತು 'ಆತ್ಮ' ಈ ಎರಡು ಶಬ್ದಗಳ ಜೋಡಣೆಯೇ ಅಧ್ಯಾತ್ಮ; ಆತ್ಮನನ್ನು ಕುರಿತ ಸಿದ್ಧಾಂತವೇ ಅಧ್ಯಾತ್ಮವಾದ, ಅಧ್ಯಾತ್ಮವಾದಕ್ಕೂ ಭೌತಿಕ ವಾದಕ್ಕೂ ಇರುವ ವ್ಯತ್ಯಾಸವನ್ನು, ಈ ಕೆಳಗಿನ ದೃಷ್ಟಾಂತದಿಂದ ಅರ್ಥಮಾಡಿಕೊಳ್ಳಲು ಯತ್ನಿಸೋಣ:–

ಒಬ್ಬನು ಒಂದು ಪೇಟೆಯಲ್ಲಿ ಹೋಗುತ್ತಿದ್ದಾನೆ. ಅವನಿಗೆ ಅಜೀರ್ಣವಾಗುತ್ತಿರುವುದರಿಂದ, ಔಷಧ ಪಡೆಯಲು ವೈದ್ಯರ ಬಳಿ ಹೋಗಬೇಕೆಂದಿದ್ದಾನೆ. ದಾರಿಯಲ್ಲಿ ಒಂದು ಮಿಠಾಯಿ ಅಂಗಡಿ ಸಿಕ್ಕುತ್ತದೆ; ಅದರ ಸುಂದರ ರೂಪವನ್ನೂ ಸಿಹಿಗಂಪನ್ನೂ ಕಂಡು ಬಾಯಿಯಲ್ಲಿ ನೀರುಬರುತ್ತದೆ "ಭೌತಿಕವಾದ ಜಿಲೇಬಿ. ರುಚಿಯಾಗಿದೆ; ತಿಂದೇ ಬಿಡೋಣ. ಹೇಗೂ ಅಜೀರ್ಣವಾಗಿಯೇ ಇದೆ; ಇನ್ನು ಸ್ವಲ್ಪ ತಿಂದರೆ ಮುಳುಗಿಹೋಗುವುದೇನಂತೆ! ತಿನ್ನುವ ಸುಖವಂತೂ ಲಭಿಸಿಯೇ ಲಭಿಸುವುದು" ಎಂದು ನಿರ್ಧರಿಸಿದರೆ—ಅದು ಭೌತಿಕವಾದವೆನ್ನಿಸಿಕೊಳ್ಳುತ್ತದೆ. ಅದಕ್ಕೆ ವಿರುದ್ಧವಾಗಿ, "ಮೊದಲೇ ನಿಯಮ ಭಂಗಮಾಡಿ ಆತ್ಮನನ್ನು ರೋಗಕ್ಕೆ ಗುರಿಮಾಡಿದ್ದೇನೆ. ಈಗ ಪುನಃ ಅದೇ ನಿಯಮ ಭಂಗಕ್ಕೆ ಕೈಹಾಕಿದರೆ, ಕ್ಷಣಿಕ ತೃಪ್ತಿಯೇನೋ ಲಭಿಸಬಹುದಾದರೂ, ಆ ದೌರ್ಬಲ್ಯದಿಂದ, ಆತ್ಮನಲ್ಲಿ ಭಯಂಕರ ಸಂಸ್ಕಾರ ವಾಸನೆ ಬೀಳುವುದು. ಆದುದರಿಂದ ಎಷ್ಟೇ ಆಸೆಯಾಗಲಿ; ನಾನು ಈ ಜಿಲೇಬಿ ತಿಂದು ಆತ್ಮನಿಗೆ ವಿಕಾರವನ್ನುಂಟುಮಾಡಿ ಕೊಳ್ಳುವುದಿಲ್ಲ" ಎಂದು ನಿರ್ಧರಿಸಿದರೆ, ಅದು ಅಧ್ಯಾತ್ಮವಾದವೆನ್ನಿಸಿಕೊಳ್ಳುತ್ತದೆ. ಇದು ನಿಷೇಧಾತ್ಮಕ ದೃಷ್ಟಾಂತವಾಯಿತು. ಇದೇ ರೀತಿ, ಪ್ರತಿಯೊಂದು ವಿಷಯವನ್ನೂ ಆತ್ಮನ ದೃಷ್ಟಿಯಿಂದ ನೋಡುವುದೇ ಅಧ್ಯಾತ್ಮವಾದ.

ಈಗ ನಾವು ಅಧ್ಯಾತ್ಮವಾದ ಅತಿಸುಲಭವಾಗಿ ಅರ್ಥವಾಗುವುದೆಂದು ಅದೇಕೆ ಹೇಳಿದೆವೆಂಬುದು ಗೊತ್ತಾಗಿರಬಹುದು. ಜೀವ-ಜೀವರ ನಡುವೆ ಸ್ವರೂಪಭೇದವಿಲ್ಲ. ಸುಖ-ದುಃಖಗಳನ್ನು ಅನುಭವಿಸುವವರು ಜೀವರೇ

ಹೊರತು, ಸಚ್ಚಿದಾನಂದ ರೂಪನಾದ ಪರಮಾತ್ಮನಾಗಲೀ, ಜಡವಾದ ಪ್ರಕೃತಿಯಾಗಲೀ ಅಲ್ಲ. ಆದುದರಿಂದ ತನ್ನಂತೆ ಎಲ್ಲ ಜೀವರೂ ಎಂಬ ಮೂಲ ಸಿದ್ಧಾಂತವನ್ನು ಗಮನದಲ್ಲಿಟ್ಟುಕೊಂಡು, ತನ್ನ ಜೀವಾತ್ಮನ ಮೇಲೆ ಆಗಬಹುದಾದ ಪ್ರತಿಕ್ರಿಯೆಯ ದೃಷ್ಟಿಯಿಂದ ಪ್ರತಿಯೊಂದು ವಿಷಯವನ್ನೂ ನಿರ್ಧರಿಸುವುದೇ ಅಧ್ಯಾತ್ಮವಾದ. ನಮ್ಮ ಕಾರ್ಯರಂಗ ಅಥವಾ ತಪೋಭೂಮಿಯಾದ ಈ ಲೋಕದಲ್ಲೇ ನಮಗೆ ಹೆಜ್ಜೆ ಹೆಜ್ಜೆಗೂ ಅಧ್ಯಾತ್ಮವಾದದ ಆವಶ್ಯಕತೆಯಿರುತ್ತದೆ.

ಇದು ಅಧ್ಯಾತ್ಮವಾದದ ಮೂಲಭೂತ ಸಿದ್ಧಾಂತವಾಯಿತು; ಈಗ ಇದು ಕಾರ್ಯಗತವಾಗುವ ಬಗೆ ಹೇಗೆ? ಎಂಬುದನ್ನೂ ಸ್ವಲ್ಪ ವಿವೇಚಿಸೋಣ. ಜನಜೀವನಕ್ಕೆ ಅಷ್ಟಾಂಗ ಸಹಿತವಾದ ಗೂಢ ಗಂಭೀರ ಯೋಗ ಸಾಧನೆ ಕಾಮ್ಯವಾದರೂ ಅನಿವಾರ್ಯವಲ್ಲ. ಜಗತ್ತಿನಲ್ಲಿ, ಮಾನವನಿಗೆ ಕಾರ್ಯ ಮಾಡುವ ಪ್ರೇರಣೆಯನ್ನೀಯುವ ಶಕ್ತಿಗಳನ್ನೆಲ್ಲಾ ಗ್ರಾಹ್ಯ ಮತ್ತು ತ್ಯಾಜ್ಯ- ಎಂಬ ಎರಡು ಭಾಗಗಳಲ್ಲಿ ವಿಂಗಡಿಸಬಹುದು. ಆತ್ಮನಿಗೆ ಬಲವನ್ನೀಯುವ ಗುಣಗಳೇ ಗ್ರಾಹ್ಯ ಶಕ್ತಿಗಳು; ಆತ್ಮನ ಬಲವನ್ನು ಮುರಿಯುವಂತಹ ಗುಣಗಳೇ ತ್ಯಾಜ್ಯ ಶಕ್ತಿಗಳು. ಗ್ರಾಹ್ಯ ಶಕ್ತಿಗಳನ್ನು, ಅಂದರೆ ಸದ್ಗುಣಗಳನ್ನು ರೂಢಿಸಿಕೊಂಡು, ತ್ಯಾಜ್ಯ ಶಕ್ತಿಗಳನ್ನು-ಅಂದರೆ ದುರ್ಗುಣಗಳನ್ನೂ ದೂರೀಕರಿಸುವುದೇ ಅಧ್ಯಾತ್ಮವಾದದ ಕ್ರಿಯಾತ್ಮಕ ರೂಪ. **ಪ್ರತಿಯೊಂದು ದುರ್ಗುಣವೂ ಆತ್ಮನಿಗೆ ಒಂದು ಶತ್ರು ಎಂದು ಭಾವಿಸಿ, ದುರ್ಗುಣವನ್ನು ಸದೆಬಡಿಯಲು ಸದಾ ಕಾರ್ಯೋನ್ಮುಖನಾಗಿರುವವನೇ ನಿಜವಾದ ಅಧ್ಯಾತ್ಮವಾದಿಯೇ ಹೊರತು, ಅಧ್ಯಾತ್ಮ ವಾದಕ್ಕೆ ಯಾರಿಗೂ ತಿಳಿಯದಂತಹ ಜಟಿಲ ಶಬ್ದ ಜಾಲಮಯವಾದ ರೂಪವನ್ನಿತ್ತು ಪಾಂಡಿತ್ಯ ಪ್ರಕಾಶನ ಮಾಡುವವನು ಅಧ್ಯಾತ್ಮವಾದಿ ಎನ್ನಿಸಲಾರನು.**

ಈ ಮೂರು ಪ್ರಕರಣಗಳಾದ ನಂತರ, ಈಗ ನಾವು ಈ ರಚನೆಯ ಮುಖ್ಯ ವಿಷಯವಾದ **"ಆದರ್ಶ ಮಾನವ"** ಎಂಬ ಪ್ರಕರಣವನ್ನು ಆರಂಭಿಸುತ್ತೇವೆ. ಮನುಷ್ಯ-ಎಂಬ ಮಾತೇ ಬಹಳ ದೊಡ್ಡದು.

**ಯೋಚಿಸಿ ತಿಳಿದು ಕಾರ್ಯ ಮಾಡುವವನೇ ಮನುಷ್ಯ** – ಎಂದು ನಿರುಕ್ತಕಾರರು ಹೇಳಿದ್ದಾರೆ. ತನ್ನಂತೆ ಪರರು – ಎಂಬ ವಿವೇಕದಿಂದ ಕೆಲಸ ಮಾಡುವುದೇ ಮನುಷ್ಯನ ಸ್ವಭಾವ. ಅದೇ ಮಾನವ ಧರ್ಮ. ಮಹಾಭಾರತಕಾರರಾದ ಭಗವಾನ್ ವೇದವ್ಯಾಸ ಮಹರ್ಷಿಗಳು, ಧರ್ಮಕ್ಕೆ ಎಷ್ಟೆಷ್ಟೋ ಲಕ್ಷಣಗಳನ್ನು ಹೇಳಿದರು; ಕೊನೆಗೆ, ನಿರ್ಧಾರವಾಗಿ ಧರ್ಮ ಯಾವುದು ಎಂಬುದನ್ನು ಹೇಳುವಾಗ–

**ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾಚೈವಾವ ಧಾರ್ಯತಾಂ ।**
**ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ ॥**

[ಮಹಾ ಭಾರತ]

ಎಂದೇ ಸಾರಿದ್ದಾರೆ. "ಮಾನವರೇ! ಧರ್ಮಸಾರವನ್ನು ಕೇಳಿರಿ. ಕೇಳಿ ಅರಗಿಸಿಕೊಳ್ಳಿರಿ. ಮಾನವನು, ತನಗೆ ಬೇಡವಾದುದನ್ನು ಬೇರೆಯವರಿಗೂ ಮಾಡಬಾರದು" ಮನುಮಹಾರಾಜನೂ ಸಹ, ಧರ್ಮದ ಚತುರ್ವಿಧ ಲಕ್ಷಣಗಳನ್ನು ಬಣ್ಣಿಸುತ್ತಾ ಹೇಳಿದ್ದಾನೆ :—

**ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯಚಪ್ರಿಯಮಾತ್ಮನಃ ।**
**ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಂ ॥**

[ಮನು, ಅಧ್ಯಾಯ–೨, ಶ್ಲೋಕ–೧೨]

"ವೇದ, ಸ್ಮೃತಿ, ಸದಾಚಾರ ಮತ್ತು ತನ್ನ ಆತ್ಮನಿಗೆ ಪ್ರಿಯವಾದುದು. ಈ ನಾಲ್ಕನ್ನೂ ಧರ್ಮದ ಸಾಕ್ಷಾಲ್ಲಕ್ಷಣಗಳೆಂದು ಹೇಳುತ್ತಾನೆ. ಇದೇ ರೀತಿ ಮನುಮಹಾರಾಜನು ಇನ್ನೊಂದು ಕಡೆ, ವೇದಗಳು, ವೇದವೇತ್ತರ ಸ್ಮೃತಿಗಳು ಮತ್ತು ನಡತೆ, ಸಾಧು ಪುರುಷರ ಆಚಾರ ಮತ್ತು ತನಗೆ ಸಂತೋಷವುಂಟುಮಾಡುವಂತಹುದು? – ಇವು ಧರ್ಮಲಕ್ಷಣಗಳೆಂದು ಹೇಳಿದ್ದಾನೆ. ಇದೆಲ್ಲಾ ನಾವು ಹಿಂದೆ ಹೇಳಿರುವ ಯಜುರ್ವೇದ ಮಂತ್ರದ ವ್ಯಾಖ್ಯಾನ ಮಾತ್ರ. ತತ್ವತಃ, ಸರ್ವಧರ್ಮದ ಸಾರವೆಂದರೆ, ಆತ್ಮೌಪಮ್ಯ ಭಾವನೆಯೇ ಸರಿ. ಆದಕಾರಣ ಆತ್ಮೌಪಮ್ಯ ಭಾವನೆಯೇ ಮಾನವಧರ್ಮ. ಈ ಮಾನವ

ಧರ್ಮವನ್ನು ಕಾಯ, ವಾಕ್ಕು ಮತ್ತು ಮನಸ್ಸಿನಿಂದ ಆಚರಿಸುವವನೇ ಆದರ್ಶಮಾನವ. ಮಾನವನು ಆದರ್ಶ ಮಾನವನಾಗಬೇಕಾದರೆ, ಅವನು ಕೆಲವು ಶತ್ರುಗಳನ್ನು ಜಯಿಸಬೇಕಾಗುತ್ತದೆ. ಆ ಶತ್ರುಗಳನ್ನು ವೇದವು 'ಅರಾತಿ' – ಎಂದು ಕರೆದಿದೆ. ಪಾತಕರಾಗಲೇ **"ಮಾಂತಃ ಸ್ಥುರ್ನೋ ಅರಾತಯಃ"**–ಎಂಬ ವೈದಿಕ ಪ್ರಾರ್ಥನೆಯನ್ನು ಓದಿದ್ದಾರೆ. ಭಗವದ್ಗೀತಾ ಕಾರನು ಅದೇ ಅರಾತಿಯನ್ನೇ 'ಪರಿಪಂಥಿ' ಎಂದು ಕರೆದಿದ್ದಾನೆ.

**"ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ ॥**

[ಭಗವದ್ಗೀತಾ. ಅಧ್ಯಾಯ-೩–೩೪]

"ಇಂದ್ರಿಯಗಳ ವ್ಯಾಪಾರದಲ್ಲಿ ರಾಗ ಮತ್ತು ದ್ವೇಷ ಸ್ಥಿತವಾಗಿರುತ್ತವೆ. ಅವಕ್ಕೆ ವಶರಾಗಬಾರದು. ಏಕೆಂದರೆ ಅವು ಈ ಆತ್ಮನ ಪರಿಪಂಥಿಗಳು." – ಎಂದಿದ್ದಾನೆ ಶ್ರೀ ಕೃಷ್ಣ. ಪರಿಪಂಥಿ ಅಂದರೆ ದಾರಿಗಡ್ಡ ಬರುವ ಅಥವಾ ದಾರಿ ತಪ್ಪಿಸುವ ವಿರೋಧಿ–ಎಂದು ಅರ್ಥ. ಈ **ಪರಿಪಂಥಿ 'ರಾಗ' ಅಂದರೆ ಅನುಚಿತವಾದ 'ಬೇಕು'ವಿನ ರೀತಿಯಲ್ಲಿ ಪ್ರಕಟವಾಗಬಹುದು; ಅಥವಾ ಅನುಚಿತವೇ ಆದ 'ಬೇಡ-ಅಂದರೆ ದ್ವೇಷದ ರೂಪದಲ್ಲಿ ಮೂಡಬಹುದು.** ಎರಡು ಬಗೆಯಲ್ಲಿಯೂ ಆ ಪರಿಪಂಥಿ ಹಾನಿಕರನೇ ಸರಿ. ಆತ್ಮನಿಗೆ ಶತ್ರುವೇ ಸರಿ. ಆದಕಾರಣ ಆ ಶತ್ರುವನ್ನು ಬಲಿಹಾಕಿದ ಹೊರತು ಆತ್ಮನು ಮುಂದರಿಯಲಾರ.

ಆತ್ಮನೇ ದೇವ. ಅವನು ದಿವ್ಯವಾದ ತನ್ನ ಸ್ಥಾನವನ್ನು ಸೇರಲು ಕೃತ ಸಂಕಲ್ಪನಾಗಿ ಹೊರಟಿದ್ದಾನೆ. ಅವನ ಉನ್ನತಿಯ ಹಾದಿಗೆ ಹಲಮಂದಿ ಅರಾತಿಗಳು ಅಡ್ಡ ಬರುತ್ತಾರೆ. ದೇವನು ಅವರೊಡನೆ ಹೋರಾಡುತ್ತಾನೆ. ಅರಾತಿಗಳನ್ನು ವೇದ 'ರಕ್ಷಃ' ಅಥವಾ ರಕ್ಷಸ್, ಎಂದೂ ಸಹ ಕರೆದಿದೆ.

---

1. ಮತ್ವಾ ಕರ್ಮಾಣಿ ಸೀವ್ಯಂತಿ (ನಿರುಕ್ತ)
2. ವೇದೋಽಖಿಲೋಧರ್ಮಮೂಲಂ ಸ್ಮೃತಿಶೀಲೇಚತದ್ವಿದಾಂ ।
ಆಚಾರಶ್ಚೈವಸಾಧೂನಾಮಾತ್ಮನಸ್ತುಷ್ಟಿರೇವಚ ॥

ಈ ದೇವಾಸುರ ಸಂಗ್ರಾಮದಲ್ಲಿ ವಿಜಯಿಯಾಗದವನು ಆದರ್ಶ ಮಾನವನೂ ಆಗಲಾರ. ಆದುದರಿಂದ, ಬನ್ನಿರಿ, ನಮ್ಮ ಶತ್ರುಗಳ ಸ್ವರೂಪವೇನೆಂಬುದನ್ನು ಚೆನ್ನಾಗಿ ಅರ್ಥಮಾಡಿಕೊಳ್ಳೋಣ.

೪

## ರಕ್ಷಸ್ಸಿನ ಮರ್ದನಕ್ಕಾಗಿ ದೃಢಮನಸ್ಕನಾಗು

ಹಿಂದೆ ನಾವು ರಕ್ಷಸ್ಸುಗಳ,–ಅಂತಃಶತ್ರುಗಳ ವಿಷಯ ಹೇಳಿದ್ದೇವಲ್ಲ; ಈಗವರ ಸ್ವರೂಪದರ್ಶನ ಮಾಡೋಣ. ಅವರ ಶಕ್ತಿ ಸಾಮರ್ಥ್ಯಗಳ ಆಳ ವರಿಯದೆ, ನಾವವರನ್ನು ಗೆಲ್ಲಲಾರೆವಲ್ಲವೇ? ಆದುದರಿಂದ, ಬನ್ನಿರಿ, ಈ ವೇದ ಮಂತ್ರವನ್ನಾಲಿಸೋಣ :–

**ಉಲೂಕಯಾತುಂ ಶುಶುಲೂಕಯಾತುಂ ಜಹಿ ಶ್ವಯಾತು**
**ಮುತಕೋತಯಾತುಂ । ಸುಪರ್ಣ ಯಾತುಮುತ**
**ಗೃಧ್ರಯಾತುಂ ದೃಷದೇವ ಪ್ರಮೃಣ ರಕ್ಷ ಇಂದ್ರ ॥**

[ಋಗ್ವೇದ, ಮಂ–೭, ಸೂ–೧೦೪, ಮ–೨೨]

ಇದೊಂದು ಅದ್ಭುತ ಮಂತ್ರ. ಅತಿಗಂಭೀರ ಆಧ್ಯಾತ್ಮಿಕ ಚರಿತ್ರ ನಿರ್ಮಾಣದ ಆದೇಶವನ್ನು ಕೊಡುವಾಗಲೂ ಸಹ, ಅನುಸರಿಸಿರುವ ಶೈಲಿ ಸಾಧಾರಣ ಜನತೆಗೂ ಸಹ ಅರ್ಥವಾಗುವಷ್ಟು ಸರಳವಾದುದು. ಅರ್ಥ ಮಾಡುವಾಗ, ಮಂತ್ರದ ಕೊನೆಯ ಭಾಗವನ್ನು ಮೊದಲು ತೆಗೆದುಕೊಳ್ಳ ಬೇಕು. ದೇವಾಸುರ ಸಂಗ್ರಾಮಕ್ಕೆ ರಣಕಹಳೆಯನ್ನೂದುವಾಗ ವೇದವು ಈ ರೀತಿ ಭೋರ್ಗರೆಯುತ್ತದೆ :—

**ದೃಷದೇವ ಪ್ರಮೃಣ ರಕ್ಷ ಇಂದ್ರ !**

"ಹೇ ಇಂದ್ರ! ರಕ್ಷಃ ದೃಷದಾ ಇವ ಪ್ರಮೃಣ!" "ಇಂದ್ರನೇ! ರಕ್ಷಸ್ಸನ್ನು, ಕಲ್ಲಿನಿಂದಲೋ–ಎಂಬಂತೆ ಚೆನ್ನಾಗಿ ತೀಡಿಹಾಕು." ಇದೇ

ಮೊದಲನೆಯ ಆದೇಶ. ಇಲ್ಲಿ ಜೀವಾತ್ಮನನ್ನು 'ಇಂದ್ರ' ಎಂದು ಸಂಬೋಧಿಸಲಾಗಿದೆ, 'ಇಂದ್ರ'-ಎಂದರೆ, ನಮ್ಮ ಕನ್ನಡದಲ್ಲಿಯೂ ಸಹ ಸಾಮಾನ್ಯವಾಗಿ ಬಳಕೆಯಲ್ಲಿರುವ ಅರ್ಥ 'ಒಡೆಯ'-ಎಂದೇ. ನಿಜವಾಗಿ ಜೀವಾತ್ಮನು ಈ ಶರೀರಕ್ಕೂ ಮತ್ತು ಇದರಲ್ಲಿರುವ ಇಂದ್ರಿಯಗಳಿಗೂ ಒಡೆಯನಾದುದರಿಂದ 'ಇಂದ್ರ'ನೆಂಬ ಹೆಸರಿಗೆ ಅರ್ಹನೇ ಆಗಿದ್ದಾನೆ. ತೈತ್ತಿರೀಯದಲ್ಲಿ ಹೀಗೆಯೇ ಹೇಳಿದೆ-**"ಅಸ್ಮಿನ್ನ್ವಾ ಇದಮಿಂದ್ರಿಯಂ ಪ್ರತ್ಯಸ್ಥಾದಿತಿ । ತದಿಂದ್ರಸ್ಯೇಂದ್ರತ್ವಂ"**-"ಇವನಲ್ಲಿಯೇ ಇಂದ್ರಿಯವು ಸ್ಥಾಪಿತವಾಗಿದೆ. ಇದೇ ಇಂದ್ರನ ಇಂದ್ರತ್ವ." ಆದುದರಿಂದ ದೇಹಸ್ಥನಾದ ಜೀವಾತ್ಮನೇ ಇಂದ್ರನು. ನಿರುಕ್ತಕಾರ ಯಾಸ್ಕಾಚಾರ್ಯರು, ಇಂದ್ರ ಶಬ್ದಕ್ಕೆ ನಿರುಕ್ತಿಯನ್ನು ಹೇಳುತ್ತಾ **"ಇಂದನ್ ಶತ್ರೂಣಾಂ ದಾರಯಿತಾ ವಾ ದ್ರಾವಯಿತಾ ವಾಽಽದರಯಿತಾವಾ"** ಎಂದು ಬಣ್ಣಿಸಿದ್ದಾರೆ. ಅಂದರೆ, "ಶತ್ರುಗಳನ್ನು ನೀಳುವವನು, ಅಟ್ಟುವವನು ಅಥವಾ ನಿರ್ಮೂಲ ಮಾಡುವವನು ಇಂದ್ರನು." ನಾವು, ಜೀವಾತ್ಮನ ಅಂತಃಶತ್ರುಗಳ ವರ್ಣನೆಯನ್ನು ಸಾಕಷ್ಟು ಮಾಡಿದ್ದೇವೆ; ಆ ಶತ್ರುಗಳನ್ನು ನಿರ್ಮೂಲ ಮಾಡಬಲ್ಲ ಶಕ್ತಿಶಾಲೀ ಜೀವನೇ ಇಂದ್ರನು. ಜೀವಾತ್ಮನನ್ನು ಇಂದ್ರಿಯಾಧಿಪತಿ ಎಂದು ಸಂಬೋಧಿಸಿರುವುದೇ ಬಹಳ ಭಾವನಾಯುಕ್ತವಾಗಿದೆ. ಇಂದ್ರಿಯಗಳ ದಾಸನು ಇಂದ್ರನಾಗಲಾರ; ಅವನು ಶತ್ರು ವಿಜಯವನ್ನೂ ಸಾಧಿಸಲಾರ. ಆದುದರಿಂದ, **ಸರ್ವಪ್ರಥಮ ಜೀವಾತ್ಮನು ಇಂದ್ರಿಯಗಳ ಅಧೀಶ್ವರನಾಗಬೇಕು; ಜಿತೇಂದ್ರಿಯನಾಗಬೇಕು.**

ಇಂದ್ರನಾರೆಂಬುದನ್ನರಿತೆವು. ಇನ್ನು ಶತ್ರುವಾರೆಂಬುದನ್ನೂ ಸ್ವಲ್ಪ ತಿಳಿಯಲು ಯತ್ನಿಸೋಣ. ಮಂತ್ರದಲ್ಲಿ 'ರಕ್ಷಃ' ಎಂಬ ಪದವಿದೆ. ಪುರಾಣಾದಿಕಲ್ಪಿತ ಕಾವ್ಯಗಳಲ್ಲಿ ವರ್ಣಿತರಾಗಿರುವ ಕಾಲ್ಪನಿಕ ರಾಕ್ಷಸರಿಗೂ ಈ 'ರಕ್ಷಸ್'ಗೂ ಸಂಬಂಧವಿಲ್ಲ. ನಿರುಕ್ತಕಾರರು **"ರಕ್ಷೋರಕ್ಷಿತವ್ಯಮ್ಮಾ ಆಸ್ಮಾತ್, ರಹಸಿ ಕ್ಷಣೋತೀತಿ ವಾ, ರಾತ್ರೌ ನಕ್ಷತೇ ಇತಿ ವಾ"**-ಎಂದು ನಿರುಕ್ತಿ ಹೇಳಿದ್ದಾರೆ." "ಇದರಿಂದ ಜೀವನು ತನ್ನನ್ನು ತಾನು ಕಾಪಾಡಿಕೊಳ್ಳಬೇಕು; ಮುಚ್ಚುಮರೆಯಲ್ಲಿ ಪ್ರಹಾರ ಮಾಡುವಂತಹುದೇ

'ರಕ್ಷಸ್' ಕತ್ತಲೆಯಲ್ಲಿ ಮರೆಯುವುದೂ ಸಹ 'ರಕ್ಷಸ್'ನ ಕುರುಹು" ಎಂದು ಇದರ ಸ್ಪಷ್ಟಾರ್ಥ. ಇಷ್ಟು ಹೇಳಿದ ಮೇಲೆ, ಈ ರಕ್ಷಸ್ ಯಾರೆಂಬುದು ಸುಲಭವಾಗಿಯೇ ಗೊತ್ತಾಗುತ್ತದೆ. ಎಲ್ಲಾ ಕೇಡಿಗೂ ಮೂಲವಾದುದು ದುರ್ಭಾವನೆ. ಉಪನಿಷತ್‌ಕಾರರು ಸೊಗಸಾದ ಮಾತುಗಳಲ್ಲಿ ಹೇಳಿಯೇ ಇದ್ದಾರೆ:–

**ಯನ್ಮನಸಾ ಧ್ಯಾಯತೀ ತದ್ವಾಚಾ ವದತಿ ।**
**ಯದ್ವಾಚಾ ವದತಿ ತತ್ಕರ್ಮಣಾ ಕರೋತಿ ।**
**ಯತ್ಕರ್ಮಣಾ ಕರೋತಿ ತದಭಿ ಸಂಪದ್ಯತೇ ॥**[ಛಾಂದೋಗ್ಯ]

ಅಂದರೆ, "ಮಾನವನು ಯಾವುದನ್ನು ಮನದಲ್ಲಿ ಚಿಂತಿಸುತ್ತಾನೋ, ಅದನ್ನೇ ನಾಲಗೆಯಿಂದ ಹೇಳುತ್ತಾನೆ; ಯಾವುದನ್ನು ನಾಲಗೆಯಿಂದ ಹೇಳುತ್ತಾನೋ, ಅದನ್ನೇ ಕೆಲಸದಲ್ಲಿ ತರುತ್ತಾನೆ. ಯಾವುದನ್ನು ಕೆಲಸದಲ್ಲಿಳಿಸುತ್ತಾನೋ, ಅದರ ಫಲವನ್ನೂ ಉಣ್ಣುತ್ತಾನೆ" ಆದಕಾರಣ, ನಮಗೆ ಲಭಿಸಬೇಕಾದ ಸಿಹಿ–ಕಹಿ ಫಲಗಳ ಮೂಲ, ನಮ್ಮ ಮನದಲ್ಲಿ ಮೂಡುವ ಭಾವನೆಗಳೇ ಎಂಬುದು ಸ್ಪಷ್ಟವಾಗಿದೆ. ದುರ್ಭಾವನೆ ಮನಸ್ಸಿನಲ್ಲಿ ಹುಟ್ಟಿದರೆ, ನಾಲಿಗೆ ಕೆಟ್ಟಮಾತಿನಲ್ಲಿ ಪ್ರಕಟಿಸುತ್ತದೆ. ಅದೇ ಕೆಟ್ಟಮಾತು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಕೆಟ್ಟ ಕೆಲಸದ ರೂಪಧರಿಸುತ್ತದೆ. ಕೆಟ್ಟ ಕೆಲಸ ಕೊನೆಗೆ ಕಹಿ ಫಲದಲ್ಲಿ ಪರ್ಯವಸಾನವಾಗುತ್ತದೆ. ಸ್ವಭಾವತಃ ಸುಖಾಭಿಲಾಷಿಯಾದ ಜೀವನು ಕಹಿಫಲ ಅಂದರೆ ದುಃಖವನ್ನು ಅಪೇಕ್ಷಿಸುವುದಿಲ್ಲ. ಆದರೆ ಎಲ್ಲಾ ದುಃಖದ ತಾಯಿಬೇರಾದ ದುರ್ಭಾವನೆಯನ್ನು ಕಿತ್ತು ಬಿಸುಡದೆ ಕಹಿಫಲವನ್ನು ತಪ್ಪಿಸಲಾದೀತೇ? ಆದುದರಿಂದ, ದುರ್ಭಾವನೆಯೇ ಜೀವನದ ಮೂಲ ಶತ್ರು ಅದರಿಂದ ಜೀವನವನ್ನು ರಕ್ಷಿಸಬೇಕು. ಆದಕಾರಣ, ದುರ್ಭಾವನೆ 'ರಕ್ಷಸ್' ಎಂಬುದರಲ್ಲಿ ಸಂದೇಹವಿಲ್ಲ. ಎರಡನೆಯದಾಗಿ, ದುರ್ಭಾವನೆ ಅಂತರಂಗದ ವಸ್ತು. ಒಳಗೆ ಅಡಗಿದ್ದುಕೊಂಡೇ ರಹಸ್ಯವಾಗಿಯೇ ಅದು ಜೀವನವನ್ನು ಕಾಡಿಸುತ್ತದೆ. ಪ್ರಕಟ ರೂಪದಲ್ಲಿ, ಬಹಿರಂಗವಾಗಿ ಅದು ಯಾರಿಗೂ ಕಾಣುವುದಿಲ್ಲ. ಒಳಗೊಳಗೇ ಅಡಗಿದ್ದು ತನ್ನ ವಿಶ್ವಾಸ ಪಾತ್ರ

ಅನುಚರರಾದ ಕೆಟ್ಟಮಾತು ಮತ್ತು ಕೆಟ್ಟ ಕೆಲಸ ಇವುಗಳ ಮೂಲಕ ಕೆಟ್ಟ ಪರಿಣಾಮ ವುಂಟುಮಾಡುವುದರಿಂದ ದುರ್ಭಾವನೆ 'ರಕ್ಷಸ್ಸೇ' ಸರಿ. ಮೂರನೆ ಯದಾಗಿ ದುರ್ಭಾವನೆ ಸಂಚರಿಸುವುದು ಕತ್ತಲಿನಲ್ಲೇ-ಅಂದರೆ ಅಜ್ಞಾನ ದಲ್ಲೇ. ಈ ರೀತಿಯೂ ಸಹ ದುರ್ಭಾವನೆಯ ರಕ್ಷಸ್ತ್ವ ವ್ಯಕ್ತಗೊಂಡಿದೆ. ಆದುದರಿಂದ, ಇಂದ್ರದೇವನು-ಇಂದ್ರಿಯ ವಿಜಯೀ ಜೀವಾತ್ಮನು ಮರ್ದಿಸ ಬೇಕಾದ ರಕ್ಷಸ್ಸು ಮತ್ತಾರೂ ಅಲ್ಲ; ದುರ್ಭಾವನೆಯೇ ಎಂಬುದೀಗ ನಿರ್ದಿಷ್ಟ ವಾಗಿ ಗೊತ್ತಾದಂತಾಯಿತು.

'ರಕ್ಷಸ್' ದುರ್ಭಾವನೆ, ಆ ರಕ್ಷಸ್ಸಿನಿಂದ ರೂಪತಾಳ್ದವನೇ ರಾಕ್ಷಸ. ರಾಕ್ಷಸನೂ ಮಾನವನೇ ಹೊರತು, ಅವನು ಬೇರೆ ಯೋನಿಯಲ್ಲ.

ಇನ್ನು ಈ ರಕ್ಷಸ್ಸನ್ನು ಮರ್ದಿಸಲು ಬೇಕಾದ ಸಾಧನದ ವರ್ಣನೆಯಿದೆ. **"ದೃಷದಾ ಇವ"** ಎಂಬ ಎರಡು ಮಾತುಗಳಿಂದ ಮಂತ್ರವು ಆ ಸಾಧನವನ್ನು ನಿರ್ದೇಶಿಸಿದೆ, 'ದೃಷದ್' ಎಂದರೆ 'ಕಲ್ಲು' ಎಂದರ್ಥ. 'ಇವ' ಎಂದರೆ 'ಅಂತಹ'. ಕಲ್ಲಿನ ಗುಣ ಕಠೋರತೆ. ದುರ್ಭಾವನೆಯನ್ನು ತುಳಿಯುವ ಕಾರ್ಯದಲ್ಲಿ, ಒಲಿಸಿಕೊಳ್ಳುವ ಮನೋವೃತ್ತಿಯಿಂದ ಯಾವ ಪ್ರಯೋಜನವೂ ಆಗಲಾರದು. ನಾವು ಯಾವುದನ್ನು ದುರಾಚಾರವೆಂದು ಕರೆಯುತ್ತೇವೋ ಅದು ಮಾನಸಿಕ ವ್ಯಾಧಿಯ ಬಾಹ್ಯ ಲಕ್ಷಣ ಮಾತ್ರ. ಆ ದುರಾಚಾರ ನಿರ್ಮೂಲವಾಗಬೇಕಾದರೆ, ಅದರ ಮೂಲವಾದ ದುರ್ಭಾವನೆಗೆ ಬಲವಾದ ಕೊಡಲಿಪೆಟ್ಟೇ ಬೀಳಬೇಕು. ಮನುಮಹಾರಾಜನು ಹೇಳಿದ್ದಾನೆ:-

**ನ ಜಾತು ಕಾಮಃ ಕಾಮಾನಾಮುಪ ಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿ ವರ್ಧತೇ ॥**

[ಮನು ಅಧ್ಯಾಯ ೨, ಶ್ಲೋಕ ೯೪]

"ಕಾಮವನ್ನು ಅನುಭವಿಸುತ್ತಾ ಹೋಗುವುದರಿಂದ, ಅದೆಂದಿಗೂ ಶಾಂತವಾಗುವುದಿಲ್ಲ, ಆದರೆ, ತುಪ್ಪದಿಂದ ಬೆಂಕಿ ವರ್ಧಿಸುವಂತೆ, ವರ್ಧಿಸು ತ್ತಲೇ ಹೋಗುತ್ತದೆ." ಇದು ಪ್ರತಿಯೊಬ್ಬರ ದಿನದಿನದ ಅನುಭವದಮಾತು.

“ಅದನ್ನು ಇನ್ನು ಸ್ವಲ್ಪ ಅನುಭವಿಸಿ, ಆಮೇಲೆ ಬಿಟ್ಟುಬಿಡೋಣ” ಎಂದು ಹೇಳುವ ಸಹಸ್ರಾರು ಮಂದಿಯನ್ನು ನಾವು ದಿನ ದಿನವೂ ನೋಡುತ್ತಿದ್ದೇವೆ. ಸಾಧಾರಣವಾಗಿ, ‘ಕಾಮ’ ಎಂಬ ಶಬ್ದವನ್ನು ಕೇವಲ ಸ್ತ್ರೀ-ಪುರುಷರ ಪರಸ್ಪರ ದೈಹಿಕ-ಸಂಬಂಧದ ಇಚ್ಛೆಗೆ ಮಾತ್ರ ಬಳಸುತ್ತಾರಾದರೂ, ಹಾನಿಕಾರಕವಾದ ಪ್ರತಿಯೊಂದು ಇಚ್ಛೆಯನ್ನೂ ಕಾಮವೆಂದೇ ಕರೆಯಬೇಕು. ‘ಕಮ್’ ಎಂಬ ಧಾತುವಿನಿಂದ ‘ಕಾಮ’ ಎಂಬ ಶಬ್ದ ಹುಟ್ಟುತ್ತದೆ. ‘ಕಮ್’ ಧಾತುವಿಗೆ “ಅಪೇಕ್ಷಿಸು, ಇಚ್ಛಿಸು, ಬಹಳ ಬೆಲೆ ಕಟ್ಟು” ಎಂದು ಅರ್ಥವಾಗುತ್ತದೆ. ಕಾಮವೆಂದರೆ, ಅಪೇಕ್ಷೆ, ಇಚ್ಛೆ, ಬೆಲೆಕಟ್ಟುವಿಕೆ ಎಂದಂತಾಯಿತು. ಭಾವನೆಯೇ ಇಚ್ಛೆಯ ಪೂರ್ವರೂಪವಾದುದರಿಂದ, ಭಾವನೆಯಂತಹ ಬಯಕೆಯೇ ಉದ್ಭವಿಸುತ್ತದೆ. ದುರ್ಭಾವನೆಯಿಂದ ಕೆಟ್ಟ ಬಯಕೆ ಮಾತ್ರವಲ್ಲ; ಒಳ್ಳೆಯ ಬಯಕೆಯೂ ಕಾಮವೇ ಸರಿ. ಸತ್ಯಕಾಮ, ಧರ್ಮ-ಕಾಮ-ಮೊದಲಾದ ವೈದಿಕನಾಮವಾಚೀ ಶಬ್ದಗಳಿಂದ, ಕಾಮವು ದುರಿಚ್ಛೆಯ ನಿರ್ದೇಶಕ ಮಾತ್ರವಲ್ಲ; ಸದಿಚ್ಛೆಯನ್ನೂ ಅದು ನಿರ್ದೇಶಿಸಬಲ್ಲದು ಎಂಬುದು ವ್ಯಕ್ತವಾಗುತ್ತದೆ. ಆದರೂ ಸಹ, ಅದರ ವಿಶಾಲಾರ್ಥವನ್ನು ಸಂಕುಚಿತಗೊಳಿಸಿ. ಒಳ್ಳೆಯ ಬಯಕೆಯಿಂದ ಪ್ರತ್ಯೇಕಿಸಿ, ದುರಿಚ್ಛೆಯನ್ನು ನಿರ್ದೇಶಿಸುವುದಕ್ಕೆ ಮಾತ್ರ ಕಾಮ ಶಬ್ದವನ್ನುಪಯೋಗಿಸುವುದು ರೂಢಿಯಾಗಿದೆ.

ದುರ್ಭಾವನೆಯಿಂದ ದುರಿಚ್ಛೆ ಹುಟ್ಟುವುದು. ಅದನ್ನು ತಣಿಸಿ ಗೆಲ್ಲಲು ಯಾರಿಂದಲೂ ಸಾಧ್ಯವಿಲ್ಲ. ಶ್ರೀಕೃಷ್ಣನು ಅದರ ಉಗ್ರರೂಪವನ್ನು ಹೀಗೆ ವರ್ಣಿಸಿದ್ದಾನೆ :—

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಂ ॥**

[ಗೀತಾ : ೩-೩೭]

ಅರ್ಜುನನು, “ಇಚ್ಛೆಯಿಲ್ಲದಿದ್ದರೂ ಸಹ ಮಾನವನು ಆದಾರ ಒತ್ತಡಕ್ಕೆ ಸಿಕ್ಕಿ ಪಾಪ ಮಾಡುತ್ತಾನೆ?”-ಎಂದು ಕೇಳಿದ್ದನು. ಅದಕ್ಕೆ ಶ್ರೀಕೃಷ್ಣನಿತ್ತ ಉತ್ತರವಿದು :— “ಅದು ರಜೋಗುಣದಿಂದ ಹುಟ್ಟುವ ಕಾಮ

ಮತ್ತು ಕ್ರೋಧ. [ಕ್ರೋಧ ಕಾಮದ ಮರಿ ಮಾತ್ರ] ಕಾಮವು 'ಮಹಾಶನಃ'-ಎಂದರೆ, ಎಷ್ಟು ಭೋಗಿಸಿದರೂ ತೃಪ್ತಿಯೇ ಇಲ್ಲ. ಮತ್ತು 'ಮಹಾಪಾಪ್ಮಾ'-ಮಾನವನಲ್ಲಡಗಿರುವ ಮಹಾಪಾತಕವೇ ಅದು. ಅದನ್ನು ಈ ಲೋಕದಲ್ಲಿ ನಿನ್ನ ಶತ್ರುವೆಂದೇ ತಿಳಿ." ಶ್ರೀಕೃಷ್ಣನೂ ಸಹ ಈ ಕಾಮವನ್ನು ತಣಿಸಿ ಒಲಿಸಿಕೊಳ್ಳುವ ನೀತಿಯನ್ನೊಪ್ಪಿಲ್ಲ; ಕೊನೆಗೆ ಅರ್ಜುನನಿಗೆ ಹೇಳಿದ್ದಾನೆ –

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ ॥**

[ಗೀತಾ, ಅಧ್ಯಾಯ-೩, ಶ್ಲೋಕ-೪೩.]

"ಹೇ ಅರ್ಜುನ! ಆತ್ಮನು ಬುದ್ಧಿಗಿಂತಲೂ ಶ್ರೇಷ್ಠವೆಂಬುದನ್ನರಿತು, ತನ್ನ ಆತ್ಮನಿಗೆ ತಾನೇ ಆಸರೆಯಾಗಿ ನಿಂತು, ಕೇಡಿನ ನೆಲೆಯಾದ ಕಾಮವೆಂಬ ಶತ್ರುವನ್ನು ಬಲಿಹಾಕು."

ಕಾಮಕ್ಕೂ ಆತ್ಮನಿಗೂ ಶಾಂತಿಸಂಧಾನ ಅಸಂಭವ. ಶ್ರೀರಾಮನು – ಪರಮಶಾಂತಿಧನನೆನಿಸಿದ ಮರ್ಯಾದಾಪುರುಷೋತ್ತಮ. ಶ್ರೀರಾಮಚಂದ್ರನು ಹೇಳಿದ ವೀರವಾಕ್ಯವು ನಮಗೀಗ ತಾನಾಗಿಯೇ ನೆನಪಾಗುತ್ತಿದೆ :—

**ಪರಾಕ್ರಮಸ್ಯ ಕಾಲೋಽಯಂ ಸಂಪ್ರಾಪ್ತೋಮೇ-**
**ಚಿರೇಪ್ಸಿತಃ । ಪಾಪಾತ್ಮಾಽಯಂ ದಶಗ್ರೀವೋ ವಧ್ಯತಾಂ**
**ಪಾಪನಿಶ್ಚಯಃ ॥ ೪೭ ॥**

**ಅರಾವಣಮರಾಮಂ ವಾ ಜಗದ್ದ್ರಕ್ಷ್ಯಥ ವಾನರಾಃ ॥ ೪೯ ॥**

[ವಾಲ್ಮೀಕಿ ರಾಮಾಯಣ, ಯುದ್ಧಕಾಂಡ, ಸರ್ಗ–೧೦೧]

ಲಕ್ಷ್ಮಣನೂ ಸಹ ರಣರಂಗದಲ್ಲಿ ರಾವಣನ ಮುಂದೆ ನಿಸ್ತೇಜನಾಗಿ ಬಿದ್ದಾಗ, ಶ್ರೀರಾಮನು ಹೇಳುತ್ತಾನೆ – "ನಾನು ಚಿರಕಾಲದಿಂದ ಇದಿರು ನೋಡುತ್ತಿದ್ದ ಪರಾಕ್ರಮದ ಕಾಲವಿದೋ ಬಂದಿದೆ. ಕೆಟ್ಟ ನಿರ್ಣಯಕ್ಕೆ ಬಂದಿರುವ ಈ ಪಾಪೀ ರಾವಣನು ಕೊಲ್ಲಲ್ಪಡಲಿ. ವಾನರರೇ! ನೀವು

**ರಾವಣನಿಲ್ಲದ, ಅಥವಾ ರಾಮನಿಲ್ಲದ ಭೂಮಿಯನ್ನು ನೋಡುವಿರಿ.**

ರಾಮ – ರಾವಣರಿಬ್ಬರೂ ಒಂದೇ ಭೂಮಿಯಲ್ಲಿರಲಾರರು; ಅದೇ ರೀತಿ, ಆತ್ಮ–ಕಾಮ ಇಬ್ಬರೂ ಒಂದೇ ದೇಹಕ್ಕೆ ರಾಜರಾಗಿರಲಾರರು. ಕಾಮವು ಆತ್ಮನಿಗೆ ಶತ್ರುವೇ ಸರಿ. ಅವನೊಂದಿಗೆ ಶಾಂತಿ-ಸಂಧಾನ ಮೂರು ಕಾಲದಲ್ಲಿಯೂ ಆಗದ ಮಾತು. ಸ್ವಾಮಿ ಶ್ರದ್ಧಾನಂದರ ಜೀವನ ನಮಗೆ ದೇವಾಸುರ ಸಂಗ್ರಾಮದ ಅದ್ಭುತ ಚಿತ್ರವನ್ನು ತೋರಿಸುತ್ತದೆ. ಯೌವನ ದಲ್ಲಿ ಅವರು ಮದ್ಯ ಮಾಂಸಗಳ ಸೇವನೆಗೆ ವಶರಾಗಿದ್ದರು. ಆದಿತ್ಯ ಬ್ರಹ್ಮ ಚಾರೀ, ವೇದಕಾನನ ವಿಹಾರೀ, ಆದರ್ಶ ಮಾನವ ಮಹರ್ಷಿ ದಯಾನಂದರ ಭದ್ರದರ್ಶನ ಹಾಗೂ ದಿವ್ಯೋಪದೇಶದಿಂದ ಲಾಲಾಮುನ್ಶೀರಾಮರು - ಅದೇ (ಸ್ವಾಮಿ ಶ್ರದ್ಧಾನಂದರ ಪೂರ್ವಾಶ್ರಮದ ಹೆಸರು) ಹೃದಯದಲ್ಲಿ ಸಾತ್ವಿಕ ಜೀವನದ ಬಗ್ಗೆ ಆಕಾಂಕ್ಷೆ ಏನೋ ಮೂಡಿದ್ದಿತ್ತಾದರೂ, ದುರಭ್ಯಾಸವನ್ನು ಮೆಟ್ಟಿ ನಿಲ್ಲಬಲ್ಲ ಆತ್ಮಬಲ ಇನ್ನೂ ಹುಟ್ಟಿರಲಿಲ್ಲ. ಒಂದು ದಿನ ಅವರು ಒಂದು ಸತ್ಕಾರಕೂಟಕ್ಕೆ ಹೋಗಿದ್ದರು. ಎಲ್ಲರೂ ಮೈಮರೆವಷ್ಟು ಮದ್ಯಪಾನ ಮಾಡಿ, ದುರ್ವಚನ ಮತ್ತು ಅಸಭ್ಯ ವರ್ತನೆಗಳಿಗೆ ಆರಂಭಿಸಿದರು. ಮುನ್ಶೀ ರಾಮರೂ ಸಹ ಕುಡಿದಿದ್ದರು; ಆದರಿನ್ನೂ ಮತ್ತೇರಿರಲಿಲ್ಲ. ತಮ್ಮ ಮಿತ್ರರ ದುರ್ನಡೆಯನ್ನು ಕಂಡು ಮುನ್ಶೀರಾಮರಿಗೆ ಬಹಳ ಬೇಸರವಾಯಿತು. "ಛಿ! ಮದ್ಯವು ಎಂತಹ ವಿದ್ಯಾವಂತರನ್ನೂ ಸಹ ನರಪಿಶಾಚರನ್ನಾಗಿ ಮಾಡಿದೆ! ಏನೇ ಆಗಲಿ; ನಾನು ಮದ್ಯಪಾನ ಮಾಡುವುದಿಲ್ಲ." – ಎಂದು ಕೊಂಡರು. ಆದರೆ–ಮೇಜಿನ ಕಡೆ ನೋಡಿದರು. ಒಂದೇ ಒಂದು ಬಾಟ್ಲಿ ಮದ್ಯ ಉಳಿದಿತ್ತು. ದುರಭ್ಯಾಸ ಬೆನ್ನು ಬಿಡಲಿಲ್ಲ "ಹೋಗಲಿ. ಇದೊಂದು ಬಾಟ್ಲಿ ಕುಡಿದು ಬಿಡುವೆನು. ಮತ್ತೆ ಮದ್ಯಕ್ಕೆ ಕೈಹಾಕುವುದಿಲ್ಲ" - ಎಂದು ಕೊಂಡು, ಅದನ್ನು ಬಾಟ್ಲಿಯಿಂದ ಬಟ್ಟಲಿಗೆ ಸುರಿದುಕೊಂಡರು. ಕೂಡಲೇ ಆತ್ಮನಲ್ಲಿ ಒಂದು ಮಹಾನ್ ಕ್ರಾಂತಿಯುಂಟಾಯಿತು. ಪಳಪಳನೆ ಮಿರುಗು ತ್ತಿದ್ದ ಆ ಮದ್ಯದ ಬಟ್ಟಲಲ್ಲಿ ಕೌಪೀನ ಮಾತ್ರಧಾರಿಯಾದ, ದಂಡ ಕಮಂಡಲುಗಳಿಂದ ರಾಜಿಸುತ್ತಿದ್ದ, ಅಪ್ರತಿಮ ತೇಜಸ್ವೀ ಮಹಾಪುರುಷ ನೊಬ್ಬನ ಬಿಂಬ ಮೂಡಿದಂತೆ ತೋರಿತು. ಆ ಭವ್ಯಮೂರ್ತಿ ಬಿಂಬ

ಮಹರ್ಷಿ ದಯಾನಂದರದೆಂಬುದನ್ನು ಮುನ್ಷೀರಾಮರು ಬೇಗನೇ ಊಹಿಸಿದರು. ಅವರ ಮನದಲ್ಲಿ ಮೂಡಿದ ಬಿಂಬ, ಬಟ್ಟಲಿನಲ್ಲಿ ಕಂಡಿತು. "ಛೀ! ಮರಳಿ ಮದ್ಯಕ್ಕೆ ಮನಸೋತೆನೇ? ಗುರುದೇವನ ಪಾದದಾಣೆ, ನಾನಿನ್ನು ಮದ್ಯಪಾನ ಮಾಡುವುದಿಲ್ಲ." – ಎಂದುಕೊಂಡು. ಕೈಯಲ್ಲಿದ್ದ ಮದ್ಯದ ಸೀಸೆಯನ್ನೂ ಎತ್ತಿ ಎದುರುಗೋಡೆಗೆ ಬಿಗಿದರು. ದುರಿಚ್ಛೆಯನ್ನು ತಣಿಸಲು ಯತ್ನಿಸದೆ, ಒಂದೇ ಪೆಟ್ಟಿಗೆ ಅದರ ತಲೆಮೆಟ್ಟಿ ನಿಂತರು. ಇಂತಹ ಘಟನೆಗಳಾದರೂ ನಮಗೆ ಕಲಿಸುವುದು ಒಂದೇ ಪಾಠವನ್ನು, ಕಾಮವೆಂಬುದು ತಣಿಸುವ ಭಾವನೆಯಿಂದ ತಗ್ಗುವಂತಹುದಲ್ಲ. ಮಹರ್ಷಿ ದಯಾನಂದರ ಜೀವನದ ಕೊನೆಯ ದಿನಗಳೇ ಸಾಲವೇ? ಆಗ ಅವರ ಇಹಲೋಕ ಲೀಲೆ ಮುಗಿವ ಕಾಲ ಹತ್ತಿರ ಬಂದಿತ್ತು. ಜೋಧಪುರಕ್ಕೆ ಹೊರಟಿದ್ದರು. ಶಾಹಪುರ ನರೇಶನು ಕೈಮುಗಿದು "ಭಗವನ್! ತಾವು ಹೋಗುವೆಡೆ ವೇಶ್ಯಾಗಮನ ಬಹಳವಿದೆ. ದಯಮಾಡಿ ಅದನ್ನು ಖಂಡಿಸಬೇಡಿ" - ಎಂದನು, **"ದೃಷದೇವ ಪ್ರಮೃಣ ರಕ್ಷ ಇಂದ್ರ"** – ಎಂಬ ವೇದಾದೇಶ ದಯಾನಂದ ದಂಡೀಶ್ವರನ ನಾಡಿನಾಡಿಯಲ್ಲಿಯೂ ರಕ್ತದ ಪ್ರತಿಯೊಂದು ತೊಟ್ಟಿನಲ್ಲಿಯೂ ಪ್ರವಹಿಸುತ್ತಿತ್ತು. ಅವರು ಗರ್ಜಿಸಿದರು :— "ನಾನು ಪಾತಕದ ಮಹಾವೃಕ್ಷವನ್ನು ಸಣ್ಣ ಚಾಕುವಿನಿಂದ ಕತ್ತರಿಸುವುದಿಲ್ಲ. ಅದನ್ನು ದಿಂಡುಗಡೆದುರುಳಿಸಲು ತೀಕ್ಷ್ಣತಮವಾದ ಕುಠಾರದಿಂದಲೇ ಪ್ರಹಾರ ಮಾಡುವೆನು!" ಇದರ ಪರಿಣಾಮ ಮಹರ್ಷಿ ದಯಾನಂದರ ಆತ್ಮಬಲಿದಾನವೇ ಆಯಿತು. ತಾತ್ಪರ್ಯವಿಷ್ಟೆ; ದುರ್ಭಾವನೆ ಮತ್ತು ಅದರ ಮರಿಯಾದ ದುರಿಚ್ಛೆ – ಆತ್ಮನ ಉನ್ನತಿ ಪಥದಲ್ಲಿ ಬೆಳೆದ ಮುಳ್ಳು; ಅವುಗಳ ಬೇರನ್ನು ಪ್ರಬಲ ಪ್ರಯತ್ನದಿಂದ ಕಿತ್ತೆಸೆಯದೆ, ಮೇಲೆ ಮೇಲೆ ಸವರುತ್ತಾ ಹೋದರೆ, ಮಾರ್ಗ ನಿಷ್ಕಂಟಕವಾಗುವುದಿಲ್ಲ. ಆದರೆ, ಕಸಿಮಾಡಿದಂತಾಗಿ, ಇನ್ನೂ ಹುಲುಸಾಗಿ ಬೆಳೆಯುವುದು. ಆದುದರಿಂದ, ವಿಜಯಕಾಮನಾದ ಆತ್ಮನು, ನಿರ್ದಾಕ್ಷಿಣ್ಯವಾಗಿ ತನ್ನ ಸಕಲ ಸಾಮರ್ಥ್ಯವನ್ನೂ ಏಕೀಕರಿಸಿ, ಕಾಮನೆಂಬ ಅಂತಃಶತ್ರುವನ್ನು ರಸಾತಳಕ್ಕೆ ತುಳಿದುಬಿಡಬೇಕು. ಅದನ್ನು ಬಿಟ್ಟರೆ, **"ನಾನ್ಯಃ ಪಂಥಾ ವಿದ್ಯತೇಽಯನಾಯ"** – ಹೋಗಲು ಬೇರೆ ಮಾರ್ಗವೇ ಇಲ್ಲ. ಆದುದರಿಂದ, ಬನ್ನಿರಿ, ವೇದಾದೇಶವನ್ನು ಚೆನ್ನಾಗಿ ಹೃದಯಾಂಕಿತ ಮಾಡಿಕೊಳ್ಳೋಣ :-

**"ದೃಷದೇವ ಪ್ರಮೃಣ ರಕ್ಷ ಇಂದ್ರ!"**

"ಹೇ ಇಂದ್ರಿಯಾಧೀಶ ಜೀವಾತ್ಮ! ರಕ್ಷಸ್ಸನ್ನು ಕಲ್ಲಿನಂತೆ ಕಠೋರವಾದ ಮನೋಬಲದಿಂದ ಒರೆಸಿ ಹಾಕಿಬಿಡು!"

೫

# ಗೂಗೆಯ ನಡೆಯನ್ನು ಬಲಿಹಾಕು

ರಕ್ಷಸ್ಸುಗಳ ಸ್ವರೂಪವನ್ನರಿತೆವು; ಅವನ್ನು ಕೋಮಲವಾದ ಸಾಧನೆಗಳಿಂದ ಗೆಲ್ಲಲಾಗದು; ಪ್ರಬಲವಾದ ಸಾಧನದಿಂದಲೇ ಸದೆಬಡೆಯಬೇಕು-ಎಂಬುದನ್ನೂ ನಿರ್ಧರಿಸಿದೆವು. ಈಗ ಆ ಆರು ಬಗೆ ರಕ್ಷಸ್ಸುಗಳ ಸೂಕ್ಷ್ಮವಾದ ಪರಿಚಯವನ್ನು ಆರಂಭಿಸೋಣ. ಪುನಃ ಅದೇ ವೇದಮಂತ್ರವನ್ನು ಸ್ಮರಿಸೋಣ :—

**ಉಲೂಕಯಾತುಂ ಶುಶುಲೂಕಯಾತುಂ ಜಹಿ ಶ್ವಯಾತು**
**ಮುತ ಕೋಕಯಾತುಂ । ಸುಪರ್ಣ ಯಾತುಮುತ**
**ಗೃಧ್ರಯಾತುಂ ದೃಷದೇವ ಪ್ರಮೃಣ ರಕ್ಷ ಇಂದ್ರ ॥**

[ಋಗ್ವೇದ :– ೭-೧೦೪-೨೨]

ಮೊದಲನೆಯ ರಕ್ಷಸ್ಸಾವುದು? ಈ ಮಂತ್ರ ಕರೆಗೊಡುತ್ತಲಿದೆ. – **"ಉಲೂಕಯಾತುಂ ರಕ್ಷಃ ಜಹಿ."** ಉಲೂಕ-ಎಂದರೆ ಗೂಗೆ; ಯಾತು-ಎಂದರೆ ನಡೆ. ಆದುದರಿಂದ, ಉಲೂಕ ಯಾತು–ಎಂದರೆ, ಗೂಗೆಯ ನಡೆ–ಎಂದಾಯಿತು. "ಗೂಗೆಯ ನಡೆ – ಎಂಬ ರಕ್ಷಸ್ಸನ್ನು ಬಡಿದು ಹಾಕು"-ಎಂಬುದು ವೇದದ ಆದೇಶ. ಎಂತಹ ಸೊಗಸಾದ ಆದೇಶ? ಆದರೆ-ಗೂಗೆಯ ಸ್ವಭಾವವನ್ನು ತಿಳಿಯದೆ, ಈ ಆದೇಶ ಅರ್ಥವಾಗಲಾರದು. ಗೂಗೆ ಕತ್ತಲೆಯಲ್ಲಿ ವಾಸ ಮಾಡುವ ಒಂದು ಕೊಳಕು ಪಕ್ಷಿ. ಅದು ಬೆಳಕನ್ನು ನೋಡಲಾರದು. ಯಾವನೋ ಒಬ್ಬ ಕವಿ ಗೂಗೆಯ ಬಾಯಿನಿಂದ ಹೇಳಿಸಿದ್ದಾನೆ :–

**ಯದಾಸೀತ್ಸಾರ್ವಜ್ಞ್ಯಂತ್ವಯಿ ನನು ಮದುತ್ಪಾದ ಸಮಯೇ
ಗತಂ ತತ್ಕುತ್ರಾಹೋ ತರಣಿ ರಚನಾಯಾಂ ಕಮಲಜ ।
ಸ್ವನೇತ್ರೈರಷ್ಟಾಭಿರ್ಹ್ಯಪಿನ ತಮಸೋ ಜ್ಯೋತಿರಮಲಂ
ಅಶಕ್ನೋಸ್ತ್ವಂದ್ರಷ್ಟುಂ ಕಥಮಿತಿ ಮನೋ ರೋದಿತಿ ಮಮ॥**

"ಓ ತಾವರೆಯಿಂದ ಹುಟ್ಟಿದ ನಾಲ್ಕು ಮುಖದ ಬ್ರಹ್ಮ! ನನ್ನನ್ನು ಹುಟ್ಟಿಸಿದ ಕಾಲದಲ್ಲಿ ನಿನಗಿದ್ದ ಸರ್ವಜ್ಞತ್ವ. ಸೂರ್ಯನನ್ನು ರಚಿಸುವ ಕಾಲದಲ್ಲಿ ಎಲ್ಲಿ ಹೋಯಿತು? ನಿನಗೆ ಎಂಟು ಕಣ್ಣುಗಳಿದ್ದರೂ ಸಹ ಕತ್ತಲಿನ ಶುಭ್ರವಾದ ಹೊಳಪನ್ನು ಆದೆಂತು ನೋಡಲಾರದೇ ಹೋದೆ-ಎಂದು ನನ್ನ ಮನಸ್ಸು ಅಳುತ್ತಿದೆ!" ಕವಿ, ಈ ಶ್ಲೋಕದಲ್ಲಿ ಗೂಗೆಯ ನಡೆಯನ್ನು ಮನೋಹರವಾಗಿ ಚಿತ್ರಿಸಿದ್ದಾನೆ. ಕಣ್ಣಿನಲ್ಲಿ ಜ್ಯೋತಿಯಿಲ್ಲ; ಮುಖದ ಮೇಲೆ ತೇಜಸ್ಸಿಲ್ಲ; ಹೃದಯದಲ್ಲಿ ಹುಮ್ಮಸ್ಸಿಲ್ಲ ಈ ಪಕ್ಷಿಗೆ. ಇದರ ನಡೆ-ಎಂದರೆ-ಕತ್ತಲ ಮೇಲಿನ ಮಮತೆಯೊಂದೇ. ಈ ರೀತಿ, ಕತ್ತಲ ಮೇಲಿನ ಅಕ್ಕರೆಯೇ ಗೂಗೆಯ ನಡೆ. ಭೌತಿಕ ಪಕ್ಷದಲ್ಲಿ, ಬೆಳಕಿನ ಅಭಾವವೇ ಕತ್ತಲೆ, ಆದರೆ, ಮಾನವನು ಕೇವಲ ಭೌತಿಕ ವಸ್ತುವಲ್ಲ. ಅವನ ಆತ್ಮ, ಸೂರ್ಯ, ಬೆಂಕಿ, ದೀಪ-ಮೊದಲಾದುವುಗಳಿಂದ ಲಭಿಸುವ ಬೆಳಕಷ್ಟರಿಂದ ತೃಪ್ತಿಗೊಳ್ಳುವುದಿಲ್ಲ. ಅವನಿಗೆ ಮತ್ತೊಂದು ಬಗೆಯ ಜ್ಯೋತಿಯೂ ಬೇಕು, ಆ ಜ್ಯೋತಿಯನ್ನು ಜ್ಞಾನ-ಎನ್ನುತ್ತಾರೆ. ಆ ಜ್ಞಾನದ ಅಭಾವವನ್ನು ಅಜ್ಞಾನ - ಎನ್ನುತ್ತಾರೆ. ಎಂದರೆ, ಆಧ್ಯಾತ್ಮಿಕ ದೃಷ್ಟಿಯಿಂದ ಜ್ಞಾನವೇ ಬೆಳಕು; ಅಜ್ಞಾನವೇ ಕತ್ತಲೆ. ಅಜ್ಞಾನದ ಗಾಢವಾದ ರೂಪವೇ ಮೋಹ. ಯಾವ ರೀತಿ ಬೆಳಕಿನ ಅಭಾವವು ವಸ್ತುಗಳ ನಿಜವಾದ ರೂಪವನ್ನೆಲ್ಲಾ ಮರೆಮಾಡುತ್ತದೋ, ಅದೇ ರೀತಿ ಮೋಹವು ಸತ್ಯಾಸತ್ಯ ವಿವೇಕಕ್ಕೆ ಪರದೆಯನ್ನೆಳೆದು. ಒಳ್ಳೆಯದು-ಕೆಟ್ಟದು, ಹಿತ-ಅಹಿತ, ಪಾಪ-ಪುಣ್ಯಗಳ ಬಗ್ಗೆ ತಪ್ಪು ಕಲ್ಪನೆಗಳನ್ನೇ ಉಂಟುಮಾಡುತ್ತದೆ. ಹಿಂಸೆಯನ್ನು ಅಹಿಂಸೆಯೆಂದು ಪ್ರತಿಪಾದಿಸುವುದು, ಜಡವನ್ನು ಚೇತನನೆಂದು ತಿಳಿಯುವುದು ಅನಿತ್ಯವನ್ನು - ನಿತ್ಯವೆಂದು ತಿಳಿಯುವುದು. ದುಃಖವನ್ನು ಸುಖವೆಂದು ಭಾವಿಸುವುದು, ಕೊಳಕಾದುದನ್ನು ಶುಚಿ-ಎಂದರಿಯುವುದು-ಇದೆಲ್ಲಾ ಮೋಹದ ಪ್ರಭಾವವೇ! ಮೋಹ ಒಂದು ಬಗೆಯ

ಭ್ರಾಂತಿ. ಆದರೆ, ಮೋಹಿಯಾದವನಿಗೆ ಭ್ರಾಂತಿ-ಎನಿಸುವುದಿಲ್ಲ. **ವಸ್ತುತಃ** ದುಃಖರೂಪವಾದ ಮೋಹವನ್ನು ಮಹಾಸುಖಪ್ರದವೆಂದೇ ಭಾವಿಸಿ ಮೋಹಿ ಯಾದವನು ಬಳಲುತ್ತಾನೆ. ಮೋಹವು ಅಜ್ಞಾನದ ಗಾಢವಾದ ರೂಪ-ಎಂಬ ಮಾತು ನೆನಪಿನಲ್ಲಿದ್ದರೆ, ಪ್ರಪಂಚದ ಸರ್ವ ದುಃಖಗಳಿಗೂ ಅದೇ ಮೂಲ-ಎಂಬುದು ಸಹಜವಾಗಿಯೇ ಅರ್ಥವಾಗುತ್ತದೆ. ನಾವು ಯಾವುದನ್ನು ಅಜ್ಞಾನದ ಗಾಢರೂಪ ಅಥವಾ ಮೋಹವೆಂದು ನಿರ್ದೇಶಿಸುತ್ತಿದ್ದೇವೋ, ಅದನ್ನೇ ಯೋಗದರ್ಶನಕಾರರಾದ ಮಹರ್ಷಿ ಪತಂಜಲಿಗಳು 'ವಿಪರ್ಯಯ' ಎಂದು ಕರೆದು, ಹೀಗೆ ಲಕ್ಷಣವನ್ನು ಹೇಳಿದ್ದಾರೆ :—

**ವಿಪರ್ಯಯೋ ಮಿಥ್ಯಾಜ್ಞಾನಮತದ್ರೂಪ ಪ್ರತಿಷ್ಠಂ ॥**

[ಸಮಾಧಿಪಾದ; ಸೂತ್ರ ೮]

ಎಂದರೆ, "ವಸ್ತುವಿನ ಅಥವಾ ತತ್ತ್ವದ ನಿಜವಾದ ರೂಪವನ್ನು ಬಿಟ್ಟು ಬೇರೆ ರೂಪದಿಂದ ಅದನ್ನು ಚಿತ್ತಕ್ಕೆ ತೋರಿಸುವ ಮಿಥ್ಯಾಜ್ಞಾನವೇ ವಿಪರ್ಯಯ." ಮಾತು ಬಹಳ ಸ್ಪಷ್ಟವಾಗಿದೆ. ಈ ವಿಪರ್ಯಯ, ಈ ಅಜ್ಞಾನದ ಗಾಢರೂಪ, ಈ ಮೋಹ ಮಾನವನನ್ನು ದಾನವನನ್ನಾಗಿ ಮಾಡುತ್ತದೆ. ಈ ಮೋಹವೇ, ಈ ಅಜ್ಞಾನದ ಗಾಢರೂಪವೇ ಅಹಿಂಸಾಮಯವಾದ ಯಜ್ಞವನ್ನು ಪಶುಹಿಂಸಾಮಯವಾದ ಹೇಯ ಕರ್ಮವನ್ನಾಗಿ ಮಾರ್ಪಡಿಸಿತು. ಸ್ವತಃ ವೇದವೇ **"ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ । ಸ ಇದ್ದೇವೇಷು ಗಚ್ಛತಿ ॥** ಋಗ್ವೇದ ೧, ೧, ೪] "ಹೇ ಜ್ಯೋತಿರ್ಮಯ! ಯಾವ ಅಹಿಂಸಾಮಯವಾದ ಯಜ್ಞದಲ್ಲಿ ನೀನು ಎಲ್ಲೆಡೆಯಿಂದ ವ್ಯಾಪಕನಾಗಿರುತ್ತೀಯೋ, ಅದೇ ದೇವಜನರಿಗೆ, ವಿದ್ವಾಂಸರಿಗೆ ಮುಟ್ಟುತ್ತದೆ" ಎಂದು ಸಾರುತ್ತಿದೆ, ಯಜುರ್ವೇದ ಪರಮಾತ್ಮನ ವರ್ಣನೆ ಮಾಡುತ್ತಾ **"ನ ತಸ್ಯ ಪ್ರತಿಮಾ ಅಸ್ತಿ ಯಸ್ಯ ನಾಮ ಮಹದ್ಯಶಃ । ಮಾ ಮಾ ಹಿಂಸೀದಿತ್ಯೇಷ ಯಸ್ಮಾನ್ನ ಜಾತ ಇತ್ಯೇಷ ॥** [೩೨, ೩] "ಯಾವನು ಮಹಾಯಶಸ್ವಿಯೋ ಅವನಿಗೆ ಪ್ರತಿಮೆಯಿಲ್ಲ. ಹಿಂಸೆ ಮಾಡಬಾರದು, ಹಿಂಸೆ ಮಾಡಬಾರದು-ಎಂಬುವವನಿವನು; ಅಜನ್ಮನಾದುದರಿಂದ

ಪೂಜ್ಯನು ಎನಿಸುವನು" ಎಂದು ಘೋಷಿಸುತ್ತಲಿದೆ. ಹಾಗಿದ್ದರೂ ಯಜ್ಞದಲ್ಲಿ ಪಶುಬಲಿ, ನಿರಾಕಾರನ ಪ್ರತಿಮಾಕಲ್ಪನೆ- ಇವುಗಳನ್ನು ಸೃಷ್ಟಿಸಿದುದು ಇದೇ ಮೋಹ! ಈ ಮೋಹದ ವಕ್ರಲೀಲೆಗಳನ್ನು ಎಷ್ಟೆಂದು ವರ್ಣಿಸಲಾದೀತು.? ವೇದಗಳು **"ಏಕಂ ಸದ್ವಿಪ್ರಾ ಬಹುದಾ ವದಂತಿ"** [ಋಗ್ವೇದ: ೧, ೧೬೪, ೪೬] "ಇರುವುದು ಸತ್ಯರೂಪನಾದ ಪ್ರಭು ಒಬ್ಬನೇ; ಜ್ಞಾನಿಗಳು ಅನೇಕ ಬಗೆಯಿಂದ ವರ್ಣಿಸುತ್ತಾರೆ; ಅನೇಕ ಹೆಸರುಗಳಿಂದ ಕರೆಯುತ್ತಾರೆ."

**"ನ ದ್ವಿತೀಯೋ ನ ತೃತೀಯಶ್ಚತುರ್ಥೋ ನಾಪ್ಯುಚ್ಯತೇ ||**
**ನ ಪಂಚಮೋ ನ ಷಷ್ಠಃ ಸಪ್ತಮೋ ನಾಪ್ಯುಚ್ಯತೇ ||**
**ನಾಷ್ಟಮೋ ನ ನವಮೋ ದಶಮೋ ನಾಪ್ಯುಚ್ಯತೇ |**
**ಏಕ ಏಕವೃದೇಕ ಏವ ||** [ಅಥರ್ವ: ೧೩, ೪, ೧೬-೨೦]

"ದೇವರು ಎರಡನೆಯುವನಾಗಲೀ, ಮೂರನೆಯುವನಾಗಲೀ, ನಾಲ್ಕನೆಯುವನಾಗಲಿ ಇಲ್ಲ; ಐದನೆಯುವನಾಗಲೀ, ಆರನೆಯುವನಾಗಲೀ, ಏಳನೆಯುವನಾಗಲೀ ಇಲ್ಲ; ಎಂಟನೆಯುವನಾಗಲೀ, ಒಂಭತ್ತನೆಯುವನಾಗಲೀ, ಹತ್ತನೆಯುವನಾಗಲೀ ಇಲ್ಲ. ಇರುವುದು ಸರ್ವವ್ಯಾಪಕನಾದ ಸ್ವಾಮಿಯೊಬ್ಬನೇ" ಎಂದು ಘಂಟಾಘೋಷವಾಗಿ ಸಾರುತ್ತಿದ್ದರೂ ಸಹ, ನೂರಾರು ದೇವಿ ದೇವತೆಯರ ಕಲ್ಪನೆ ಮಾಡಿಕೊಂಡು, ಮಾನವ ಜಾತಿಯಲ್ಲಿ ಒಡಕನ್ನು ಹುಟ್ಟಿಸಿದುದು ಇದೇ ಮೋಹ. **"ತೇ ಅಜ್ಯೇಷ್ಠಾ ಅಕನಿಷ್ಠಾಸ ಉದ್ಭಿದಃ"** [ಋಗ್ವೇದ: ೫, ೫೯, ೬] ಮಾನವರಲ್ಲಿ ಯಾರೂ ದೊಡ್ಡವರಲ್ಲ; ಯಾರೂ ಚಿಕ್ಕವರಲ್ಲ; ಎಲ್ಲರೂ ಚಿಕ್ಕದರಿಂದ ದೊಡ್ಡವರಾಗುವವರೇ" ಎಂದು ವೇದ ಹೇಳುತ್ತಿದ್ದರೂ, ಮೇಲು-ಕೀಳೆಂಬ ಪೈಶಾಚಿಕ ಭಾವನೆಯ ಆಧಾರದ ಮೇಲೆ ನಿಂತ ಜಾತಿ ಪದ್ಧತಿಯನ್ನು ಸೃಜಿಸಿದುದು ಇದೇ ಮೋಹ. ಕೇವಲ ಧಾರ್ಮಿಕ ಕ್ಷೇತ್ರದಲ್ಲೇ ಅಲ್ಲ; ರಾಜನೈತಿಕ, ಆರ್ಥಿಕ-ಎಲ್ಲ ವಿಷಯಗಳಲ್ಲಿಯೂ ವಿಷಮತೆಗೆ ಎಡೆಕೊಡುವ ಪದ್ಧತಿಗಳನ್ನು ಜಾರಿಗೆ ತಂದಿರುವುದೂ ನಿಸ್ಸಂದೇಹವಾಗಿ ಇದೇ ಮೋಹ. ಕೇವಲ ಸಾಮಾಜಿಕ ಕ್ಷೇತ್ರವೆಂದಲ್ಲ; ವೈಯಕ್ತಿಕ

ಜೀವನದಲ್ಲಿಯೂ ಮೋಹ ಮಾಡುವ ಹಾವಳಿಗೆ ಇತಿ–ಮಿತಿಗಳನ್ನೂಹಿಸಲು ಸಾಧ್ಯವಿಲ್ಲ, ಮೋಹ, ವಿವೇಕ ಶಕ್ತಿಯನ್ನು ಪೂರ್ಣತಃ ನಾಶಮಾಡುವ, ಯಾರಿಗೂ ಹಿತಮಾಡದ ವಸ್ತು–ಈ ಜಗತ್ತಿನಲ್ಲಿ ಎಲ್ಲವೂ ಒಳಿತೇ ಇರುವುದಿಲ್ಲ. ಅಲ್ಪಜ್ಞರಾದ ಜೀವರ ಕರ್ಮಭೂಮಿಯಾದ ಈ ಜಗತ್ತಿನಲ್ಲಿ, ಒಳ್ಳೆಯದು, ಕೆಟ್ಟದು ಎರಡೂ ಇರುವುದು ಸಹಜ. ಕೆಟ್ಟದಿಂದ ಒಳ್ಳೆಯದನ್ನು ಪ್ರತ್ಯೇಕಿಸಿ, ಅಸತ್ಯದಿಂದ ಸತ್ಯವನ್ನು ಬೇರ್ಪಡಿಸಿ ತಿಳಿದುಕೊಳ್ಳದಿದ್ದರೆ ಮಾನವನ ಜೀವನದಲ್ಲಿ ಶಾಂತಿಯುದಿಸಲಾರದು. ವೇದ ಹೇಳುತ್ತಲಿದೆ:–

**ಸುವಿಜ್ಞಾನಂ ಚಿಕಿತುಷೇ ಜನಾಯ ಸಚ್ಚಾಸಚ್ಚ ವಚಸಿ ಪಸ್ಪೃಧಾತೇ ॥ ತಯೋರ್ಯತ್ಸತ್ಯಂ ಯತರದೃಜೀಯ ಸ್ತದಿತ್ಸೋಮೋವತಿ ಹಂತ್ಯಾಸತ್ ॥** [ಅಥರ್ವ: ೮: ೪, ೧೨]

"ತಿಳಿದುಕೊಳ್ಳಬೇಕೆಂಬ ಆಸೆಯುಳ್ಳ ಮಾನವನಿಗೆ ಇದು ಉತ್ತಮ ವಿಜ್ಞಾನ; ಈ ಲೋಕದಲ್ಲಿ ಸತ್ಯ ಮತ್ತು ಅಸತ್ಯ–ಎರಡು ಬಗೆಯ ಮಾತುಗಳೂ ಪರಸ್ಪರ ಸ್ಪರ್ಧಿಸುತ್ತಿವೆ. ಅದರಲ್ಲಿ ಯಾವುದು ಸತ್ಯವೋ, ಯಾವುದು ನೇರವಾದುದಾಗಿರುತ್ತದೋ, ಅದನ್ನೇ ಪ್ರಶಾಂತನಾದವನು ರಕ್ಷಿಸುತ್ತಾನೆ; ಅಸತ್ಯವಾದುದನ್ನು ನಾಶಮಾಡುತ್ತಾನೆ." ಮಾನವನು ಮೋಹಿಯಾಗಿರುವವರೆಗೆ ಸತ್ಯವನ್ನು ಗುರುತಿಸಲಾರನು. ಏಕೆಂದರೆ ಅವನ ವಿವೇಕ ಶಕ್ತಿ ಕ್ಷೀಣವಾಗಿರುತ್ತದೆ. "ನನ್ನದು ಯಾವುದೋ ಅದೇ ಸತ್ಯ" ಎಂದು ಅವನು ಹೇಳುತ್ತಾನೆಯೇ ಹೊರತು "ಯಾವುದು ಸತ್ಯವೋ ಅದೇ ನನ್ನದು" ಎಂದು ಹೇಳಲು ಅವನಿಗೆ ಬಾರದು. ಏಕೆಂದರೆ ಅವಿವೇಕ ಅವನ ಹೃದಯವನ್ನು ಸಂಕುಚಿತವಾಗಿ ಮಾಡಿಬಿಡುತ್ತದೆ. ಇನ್ನವನು ಮುಂದುವರಿಯುವ ಸಂಭವವಾದರೂ ಎಲ್ಲಿರುತ್ತದೆ? ವೇದದಲ್ಲಿ ಹೀಗೆ ಹೇಳಿದೆ:–

**ದೃಷ್ಟ್ವಾ ರೂಪೇ ವ್ಯಾಕರೋತ್ ಸತ್ಯಾನೃತೇ ಪ್ರಜಾಪತಿಃ ।**
**ಅಶ್ರದ್ಧಾಮನೃತೇಽದಧಾತ್ ಶ್ರದ್ಧಾಂ ಸತ್ಯೇ ಪ್ರಜಾಪತಿಃ ॥**

[ಯಜುರ್ವೇದ : ೧೯, ೭೭]

"ಪ್ರಜಾಪತಿಯಾದ ಪರಮಾತ್ಮನು ಸತ್ಯ ಮತ್ತು ಅಸತ್ಯವನ್ನು ತನ್ನ ಸರ್ವಜ್ಞತ್ವದಿಂದ ಬೇರೆ ಬೇರೆ ಮಾಡಿದನು. ಮತ್ತು ಅಸತ್ಯದಲ್ಲಿ ಅಶ್ರದ್ಧೆಯು ಮತ್ತು ಸತ್ಯದಲ್ಲಿ ಶ್ರದ್ಧೆಯು ವಿಧಾನವನ್ನು ಮಾಡಿದನು." ಸರ್ವಜ್ಞನಾದ ಈಶ್ವರನು ವೇದಗಳ ಮೂಲಕ ಸತ್ಯಾಸತ್ಯ ವಿವೇಕವನ್ನು ಕರುಣಿಸಿ, ಜನರು ಆದರ ಮೂಲಕ ಅಸತ್ಯದಲ್ಲಿ ಸದಾ ಅಶ್ರದ್ಧೆಯನ್ನೂ, ಸತ್ಯದಲ್ಲಿ ಶ್ರದ್ಧೆಯನ್ನೂ ತೋರಬೇಕೆಂದು ವಿಧಿಸಿದ್ದಾನೆ. ಆದರೆ ಆ ರೀತಿಮಾಡಲು ವಿವೇಕ ಶಕ್ತಿ ಬೇಕು. ಅವಿವೇಕವಿದ್ದರೆ-ಮೋಹವಿದ್ದರೆ-ಸತ್ಯದಲ್ಲಿ ಅಶ್ರದ್ಧೆಯನ್ನೂ, ಅಸತ್ಯದಲ್ಲಿ ಶ್ರದ್ಧೆಯನ್ನೂ ತೋರುವುದು ಅನಿವಾರ್ಯವೇ ಆಗಿರುತ್ತದೆ. ಇಂದಿನ ಮಾನವ ಸಮಾಜದ ಸ್ಥಿತಿ ಹೀಗೆಯೇ ಇದೆಯಲ್ಲವೆ? ಇನ್ನು ಮೋಹ ವೆಂಬ ರಾಕ್ಷಸ ಮಾನವತ್ವದ ಕೊರಳನ್ನು ಹಿಸುಕುತ್ತಿದ್ದಾನೆ ಎಂಬುದರಲ್ಲಿ ಸಂದೇಹವಾದರೂ ಏನಿದೆ? ಮೋಹಕ್ಕೆ ವಶೀಭೂತರಾದ ಮಾನವರು, ಶ್ರದ್ಧೆ-ಎಂಬ ಮಾತಿಗೂ ಸಹ ಅಪಾರ್ಥ ಕಲ್ಪನೆಯನ್ನೇ ಮಾಡುತ್ತಿದ್ದಾರೆ, **"ಶ್ರತ್+ಧಾ =ಶ್ರದ್ಧಾ. ಶ್ರದಿತಿಸತ್ಯಂ ತದ್ಯಯಾ ಧಾರ್ಯತೇ ಸಾ ಶ್ರದ್ಧಾ"** ಎಂದರೆ "ಯಾವುದರಿಂದ ಸತ್ಯದ ಧಾರಣೆಯಾಗುತ್ತದೋ, ಅದೇ ಶ್ರದ್ಧೆ." ಆದಕಾರಣ, ಶ್ರದ್ಧೆ ಸತ್ಯದಲ್ಲಿ ಮಾತ್ರ ಇರಬಲ್ಲದೇ ಹೊರತು ಅಸತ್ಯದಲ್ಲಿ ಎಂದಿಗೂ ಅಲ್ಲ. ಈ ಕಾರ್ಯ ಬುದ್ಧಿಶಕ್ತಿಯಿಲ್ಲದೆ ಸಾಧ್ಯವಿಲ್ಲ. ಆದುದರಿಂದಲೇ **"ಸ ಮೇ ಶ್ರದ್ಧಾಂಚ ಮೇಧಾಂಚ ಜಾತವೇದಾಃ ಪ್ರಯುಚ್ಛತು."** "ಸರ್ವಜ್ಞನು ಸದಾ ನನಗೆ ಶ್ರದ್ಧೆಯನ್ನೂ, ಬುದ್ಧಿ ಯನ್ನೂ ಕರುಣಿಸಲಿ" ಎಂಬ ಪ್ರಾರ್ಥನೆ ಅಥರ್ವವೇದದಲ್ಲಿ ಕಂಡುಬರುತ್ತದೆ. ಬುದ್ಧಿಯಿಲ್ಲದೆ-ವಿವೇಕಶಕ್ತಿಯಿಲ್ಲದೆ-ಸತ್ಯವನ್ನು ಗುರುತಿಸಲಾಗದು; ಸತ್ಯ ವನ್ನು ಗುರುತಿಸದೆ, ನಂಬಿಕೆಯಿಡಲೂ ಆಗದು. ಆದಕಾರಣ, ಸತ್ಯದರ್ಶನ ಕ್ಕಾಗಿ. ಎಲ್ಲಕ್ಕಿಂತ ಮೊದಲು ಮಾನವನು ಮೋಹವನ್ನು, ಭ್ರಾಂತಿಯನ್ನು, ಮಿಥ್ಯಾಜ್ಞಾನವನ್ನು ಬಲಿಹಾಕಬೇಕಾಗುತ್ತದೆ. ದೃಢವಾದ ಸಂಕಲ್ಪದಿಂದ ಆ ಉಲೂಕಯಾತುವನ್ನು-ಗೂಗೆಯ ನಡೆಯನ್ನು-ಬಲಿಹಾಕಿ, ಬೆಳಕನ್ನು-ಜ್ಞಾನವನ್ನು ಗಳಿಸಬೇಕಾಗುತ್ತದೆ. ಇಲ್ಲದಿದ್ದರೆ ಮಾನವ ಜೀವನ ವ್ಯರ್ಥ ವಾಗುತ್ತದೆ, ತಿಂದುಂಡು, ಶರೀರಕ್ಕೆ ಸುಖವಿತ್ತು ಒಂದು ದಿನ ಕಣ್ಣು

ಮುಚ್ಚಿ ಹುಡಿಗೂಡುವುದು ಮನುಷತ್ವದ ಲಕ್ಷಣವಲ್ಲ. ವಿವೇಕವಂತನೇ ಮನುಷ್ಯ. ಸತ್ಯಾನ್ವೇಷಣವೇ ಮಾನವ ಜೀವನದ ಲಕ್ಷ್ಯ. ಬನ್ನಿ, ಈ ವೇದಾದೇಶವನ್ನು ಆಲಿಸೋಣ:-

**ಯೂಯಂ ತತ್ಸತ್ಯಶವಶ ಆವಿಷ್ಕರ್ತ ಮಹಿತ್ವನಾ । ವಿಧ್ಯತಾ ವಿದ್ಯುತಾ ರಕ್ಷಃ ॥** [ಋಗ್ವೇದ: ೧. ೮೬. ೯]

ಓ ಸತ್ಯವನ್ನೇ ಶಕ್ತಿಯಾಗಿ ಹೊಂದಿರುವ ಮಾನವರೇ! ನಿಮ್ಮೊಳಗೆ ಹುದುಗಿರುವ ಮೋಹಾಂಧಕಾರವನ್ನು ಆತ್ಮಬಲದಿಂದ ಹೊರಗೆಳೆದು ಹಾಕಿರಿ. ಜ್ಞಾನದ ಸಿಡಿಲಿನಿಂದ ಆ ಮೋಹವೆಂಬ ರಕ್ಷಸ್ಸನ್ನು ಸೀಳಿಹಾಕಿರಿ." ಆಜ್ಞೆ ಅತಿ ಸ್ಪಷ್ಟವಾಗಿದೆ. ವಿವೇಕವನ್ನು ಹಾಳುಮಾಡುವ ಮೋಹವನ್ನು ಅದೇ ಉಲೂಕಯಾತು – ಜ್ಞಾನಬಲದಿಂದ ನಾಶಮಾಡಿದ ಹೊರತು, ವ್ಯಕ್ತಿಗತ ಜೀವನದಲ್ಲಾಗಲೀ ಸಾಮಾಜಿಕ ಜೀವನದಲ್ಲಾಗಲೀ ಯಾರಿಗೂ ಸುಖ-ಶಾಂತಿ ಲಭಿಸುವಂತಿಲ್ಲ. ಅರ್ಜುನನು ಶ್ರೀಕೃಷ್ಣನಿಗೆ ಹೇಳಿದ ಈ ಮಾತನ್ನು ನಾವೆಲ್ಲರೂ ಹೇಳಲು ಸಮರ್ಥರಾಗಬೇಕು.

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಽಚ್ಯುತ ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥**

[ಗೀತಾ; ೧೮, ೭೩]

"ಹೇ ಕೃಷ್ಣ! ನಿನ್ನ ದಯೆಯಿಂದ ನನ್ನ ಮೋಹವು ನಾಶವಾಯಿತು; ನನಗೆ ವಿವೇಕ ಬಂದಿತು. ನನ್ನ ಸಂದೇಹ ದೂರವಾಯಿತು. ನಿನ್ನ ಮಾತಿನಂತೆ ನಡೆಯುವೆ."

ಬನ್ನಿರಿ, ಮೋಹನಾಶಕ್ಕಾಗಿ, ಉಲೂಕಯಾತುವಿನ ಸಂಹಾರಕ್ಕಾಗಿ ತಮ್ಮ ೨೧ನೆಯ ವರ್ಷದಿಂದ ೩೬ನೆಯ ವರ್ಷದ ವರೆಗೆ, ಅಖಂಡವಾಗಿ ೧೫ ವರ್ಷಕಾಲ ಗಿರಿಗಿರಿಗಳನ್ನೂ, ವನವನಗಳನ್ನೂ, ಊರೂರನ್ನೂ, ಹಳ್ಳಿಹಳ್ಳಿಯನ್ನೂ ತಿರುಗಿ ಕೊನೆಗೆ ಮಹರ್ಷಿ ಪದವಿ ಪಡೆದ, **"ತತ್ವದರ್ಶಿ"** ಎನಿಸಿಕೊಂಡ ಸ್ವಾಮೀ ದಯಾನಂದರಂತಹ ಮಹಾಪುರುಷರ ಪದ ಚಿಹ್ನೆ

ಯನ್ನನುಸರಿಸಿ ನಡೆಯುತ್ತಾ ಮೋಹವನ್ನು, ಅವಿವೇಕವನ್ನು, ಭ್ರಾಂತಿಯನ್ನು ಬಲಿಹಾಕೋಣ. ನೆನಪಿರಲಿ:- **"ಉಲೂಕಯಾತುಂ ಜಹಿ"** "ಗೂಗೆಯ ನಡೆಯನ್ನು ಬಲಿಹಾಕು"

೬

## ತೋಳನ ನಡೆಯನ್ನು ಬಲಿಹಾಕು.

ಬನ್ನಿರಿ, ಇನ್ನೊಂದು ಹೆಜ್ಜೆ ಮುಂದಕ್ಕಿಡೋಣ. ಅದೋ ನೋಡಿ, ಅಲ್ಲಿ ಎರಡನೆಯ ರಕ್ಷಸ್ಸು ಭೀಕರ ರೂಪ ತೋರುತ್ತಾ ನಿಂತಿದೆ. ಮೊದಲನೆಯ ರಕ್ಷಸ್ಸು ಎಲ್ಲವನ್ನೂ ಮರೆಮಾಡುವ ಕತ್ತಲೆಯ ಮುದ್ದೆಯಂತಿದ್ದರೆ. ಈ ಎರಡನೆಯದು ಧಗಧಗನೆ ಉರಿದು ಎಲ್ಲವನ್ನೂ ಭಸ್ಮಮಾಡುವ ಬೆಂಕಿಯ ಮಹಾಜ್ವಾಲೆಯಂತಿದೆ. ಅದೇ ವೇದಮಂತ್ರವನ್ನು ಮತ್ತೆ ಸ್ಮರಿಸೋಣ.

**ಶುಶುಲೂಕಯಾತುಂ ಜಹಿ ।** [ಋಗ್ವೇದ: ೭, ೧೦೪, ೨೨]

ಶುಶುಲೂಕಯಾತುಂ, ತೋಳನ ನಡೆಯೆಂಬ, ರಕ್ಷಃ-ರಕ್ಷಸ್ಸನ್ನು ಜಹಿ -ಹೊಡೆದು ಹಾಕು.

ಈಗ ಎರಡನೆಯ ರಕ್ಷಸ್ಸನಲ್ಲವೇ ನಾವು ಪರಿಚಯ ಮಾಡಿಕೊಳ್ಳಬೇಕಾಗಿರುವುದು? ಈ ಮಂತ್ರದಲ್ಲಿ ಅದಕ್ಕೆ ಕೊಟ್ಟಿರುವ ಹೆಸರು **'ಶುಶುಲೂಕಯಾತು'** ಎಂದು. ಶುಶುಲೂಕಯಾತು ಎಂದರೆ ತೋಳನ ನಡೆ.

ತೋಳನ ಸ್ವಭಾವವೇನು? ಹೊಟ್ಟೆ ಹಸಿದಿರಲಿ ಅಥವಾ ತುಂಬಿರಲಿ; ಆವಶ್ಯಕತೆಯಿರಲಿ ಅಥವಾ ಇಲ್ಲದಿರಲಿ ಯಾವಾಗಲೂ ಕೋಪದಿಂದ ಉರಿದುರಿದು ಬೀಳುತ್ತಿರುವುದೇ ತೋಳನ ಸ್ವಭಾವ. ಬಾಯನ್ನಗಲಿಸಿಕೊಂಡು, ತುಟಿಗಳನ್ನದುರಿಸುತ್ತಾ 'ಗುರ್ ಗುರ್' ಎನ್ನುತ್ತಿರುವ ತೋಳ ಯಾರಿಗೂ ಪ್ರಿಯವಾಗಿ ತೋರದು. ಎಂದರೆ – ಕ್ರೋಧವೇ ಶುಶುಲೂಕಯಾತು ಅಥವಾ ತೋಳನ ನಡೆ.

ಕ್ರೋಧ-ಕೋಪ ಎಷ್ಟು ಕೆಟ್ಟದೆಂಬುದು ಯಾರಿಗೆ ತಾನೇ ಗೊತ್ತಿಲ್ಲ? ಮಾನವನ ಗೌರವ ನಿಹಿತವಾಗಿರುವುದು ವಿವೇಕ ಶಕ್ತಿಯಲ್ಲಿ. ಯಾವುದು

ಒಳ್ಳೆಯದು, ಯಾವುದು ಕೆಟ್ಟದು ಎಂದು ಪ್ರತ್ಯೇಕಿಸಿ ತಿಳಿದುಕೊಳ್ಳಬಲ್ಲ ವಿವೇಕದ ಶಕ್ತಿಯಿಂದಲೇ ಮಾನವನು ಬೇರೆಲ್ಲಾ ಪಶುಗಳಿಂದ ಶ್ರೇಷ್ಠನೆನಿಸುತ್ತಾನೆ. ಆದರೆ ಕ್ರೋಧವು ನೆತ್ತಿಗೇರಿದಾಗ ವಿವೇಕಶಕ್ತಿಯೇ ಸರ್ವಥಾ ಹಾಳಾಗಿ ಹೋಗುತ್ತದೆ. ಕ್ರೋಧ ಬಂದವನಿಗೆ ಶತ್ರು–ಮಿತ್ರ, ಸ್ವಜನ–ಪರಜನ, ಅಣ್ಣ–ತಮ್ಮ–ಅಕ್ಕ–ತಂಗಿ. ಗುರು–ಶಿಷ್ಯ ಎಂಬ ಯಾವ ವಿವೇಕವೂ ಉಳಿಯುವುದಿಲ್ಲ. ರಾವಣನ ಕಡೆಯವರು ತನಗೆ ಬಾಲಕಟ್ಟಿ ಬೆಂಕಿಯಿಟ್ಟರಲ್ಲ ಎಂಬ ಕೋಪಕ್ಕೆ ವಶೀಭೂತನಾದ ಆಂಜನೇಯ, ಲಂಕೆಗೆಲ್ಲಾ ಬೆಂಕಿ ಹಚ್ಚಿ ಬಿಡುತ್ತಾನೆ ಆಮೇಲೆ ಕೋಪ ಇಳಿಯುತ್ತದೆ. ಆಗ ಅವನು ಪರಿತಪಿಸುತ್ತಾ ಹೇಳಿಕೊಳ್ಳುತ್ತಾನೆ:–

**ಯದಿ ದಗ್ಧಾ ತ್ವಿಯಂಲಂಕಾ ನೂನಮಾರ್ಯಾಽಪಿ ಜಾನಕೀ ।**
**ದಗ್ಧಾ ತೇನ ಮಯಾ ಭರ್ತುರ್ಹತಂ ಕಾರ್ಯಮಜಾನತಾ ॥**
**ಯದರ್ಥಮಯಮಾರಂಭಃ ತತ್ಕಾರ್ಯಮವಸಾದಿತಂ ।**
**ಮಯಾ ಹಿ ದಹತಾ ಲಂಕಾಂ ಸೀತಾ ನ ಪರಿರಕ್ಷಿತಾ ॥**

[ವಾಲ್ಮೀಕಿ, ಸುಂದರ ಕಾಂಡ; ೫೫, ೯, ೧೦]

"ನನ್ನಿಂದ ಲಂಕಾ ನಗರಿ ಸುಡಲ್ಪಟ್ಟಿತಾದರೆ, ಆರ್ಯೆಯಾದ ಜಾನಕಿಯೂ ಸುಡಲ್ಪಟ್ಟಳಲ್ಲ. ಹೀಗೆ ಗೊತ್ತಿಲ್ಲದಂತೆಯೇ, ನನ್ನಿಂದ ಸ್ವಾಮಿಕಾರ್ಯ ಹಾಳುಮಾಡಲ್ಪಟ್ಟಿತು. ಯಾವಳ ಸಲುವಾಗಿ ಈ ಉದ್ಯಮ ಮಾಡಲ್ಪಟ್ಟಿತೋ ಅವಳ ಕೆಲಸವನ್ನೇ ಮುಗಿಸಿಬಿಟ್ಟೆನೇ! ಲಂಕೆಯನ್ನು ಸುಡುವ ನಾನು ಸೀತೆಯನ್ನು ರಕ್ಷಿಸಲಿಲ್ಲ!"

**ಧನ್ಯಾಸ್ತೇ ಪುರುಷಶ್ರೇಷ್ಠಾ ಯೇ ಬುದ್ಧ್ಯಾ ಕೋಪಮುತ್ಥಿತಂ**
**ನಿರುಂಧಂತಿ ಮಹಾತ್ಮಾನೋ ದೀಪ್ತಮಗ್ನಿಮಿವಾಂಭಸಾ ॥**
**ಕ್ರುದ್ಧಃ ಪಾಪಂ ನ ಕುರ್ಯಾತ್ಕಃ ಕ್ರುದ್ಧೋ ಹನ್ಯಾದ್ಗು**
**ರೂನಪಿ ಕ್ರುದ್ಧಃ ಪರುಷಯಾ ವಾಚಾ ನರಃ ಸಾಧೂನಧಿ**
**ಕ್ಷಿಪೇತ್ ॥ ವಾಚ್ಯಾವಾಚ್ಯಂ ಪ್ರಕುಪಿತೋ ನ ವಿಜಾನಾತಿ**
**ಕರ್ಹಿಚಿತ್ । ನಾಕಾರ್ಯಮಸ್ತಿ ಕ್ರುದ್ಧಸ್ಯ ನಾವಾಚ್ಯಂ**
**ವಿದ್ಯತೇಕ್ವಚಿತ್ ॥** [ವಾಲ್ಮೀಕಿ. ಸುಂದರಕಾಂಡ; ೫೫, ೨–೬]

"ಯಾವ ಮಾನವಶ್ರೇಷ್ಠರಾದ ಮಹಾತ್ಮರು, ಉರಿಯುವ ಬೆಂಕಿಯನ್ನು ನೀರಿನಿಂದ ಆರಿಸುವಂತೆ, ಉಕ್ಕೇರಿ ಬಂದ ಕೋಪವನ್ನು ಬುದ್ಧಿಯಿಂದ ತಡೆಗಟ್ಟುತ್ತಾರೋ, ಅವರೇ ಧನ್ಯರು. ಕೋಪಗೊಂಡ ಯಾವನು ತಾನೇ ಪಾಪ ಮಾಡುವುದಿಲ್ಲ? ಕೋಪಗೊಂಡವನು ತಾಯಿ, ತಂದೆ ಮತ್ತು ಆಚಾರ್ಯರನ್ನೂ ಸಹ ಕೊಂದುಬಿಡುವನು. ಕೋಪಗೊಂಡ ಮಾನವನು ಸತ್ಪುರುಷರನ್ನೂ ಸಹ ಕಠೋರವಾದ ಮಾತುಗಳಿಂದ ಧಿಕ್ಕರಿಸಿ ಮಾತನಾಡುವನು. ಕೋಪಗೊಂಡವನಿಗೆ ಯಾವ ಮಾತು ಆಡಲು ತಕ್ಕದ್ದು, ಯಾವುದು ತಕ್ಕದ್ದಲ್ಲ–ಎಂಬ ಅರಿವೂ ಸಹ ಇರುವುದಿಲ್ಲ. ಕೋಪಗೊಂಡವನ ಪಾಲಿಗೆ ಮಾಡಬಾರದ ಕಾರ್ಯವಿಲ್ಲ; ಆಡಬಾರದ ಮಾತೂ ಇಲ್ಲ."

ಹನುಮಂತನ ಪ್ರತಿಯೊಂದು ಮಾತೂ ಸತ್ಯವೇ-ಆಗಿದೆ. ನಾವು ದಿನ ದಿನ ಕೋಪದ ಕಾರಣದಿಂದಲೇ ಉದ್ಭವಿಸುವ ಎಷ್ಟು ದುರ್ಘಟನೆಗಳನ್ನು ನೋಡುತ್ತಿಲ್ಲ? ಕ್ರೋಧಿ ಬೇರೆಯವರ ಜೀವನವನ್ನಂತೂ ದುಃಖಮಯವಾಗಿ ಮಾಡಿಯೇ ಮಾಡುತ್ತಾನೆ. ತನ್ನ ಜೀವನವನ್ನೂ ನಾರಕೀಯವನ್ನಾಗಿ ಮಾಡಿಕೊಳ್ಳುತ್ತಾನೆ. ಅವನ ಕೋಪದ ಪರಿಣಾಮ ಬೇರೆಯವರ ಮೇಲಾಗುವ ಮುನ್ನ ಅವನ ಮೇಲೆಯೇ ಆಗುತ್ತದೆ. ಕೋಪಿಷ್ಟನ ನರಗಳೆಲ್ಲಾ ಉದ್ರಿಕ್ತವಾಗಿ, ಅವನ ರಕ್ತವೇ ಕುದಿಯತೊಡಗುತ್ತದೆ. ಮೆದುಳಿನ ಆಲೋಚನಾ ಶಕ್ತಿ ನಶಿಸಿ ಹೋಗುತ್ತದೆ. ಸಭ್ಯತೆ, ಸಂಸ್ಕೃತಿ-ಎಲ್ಲವನ್ನೂ ಮರೆತು, ಕುಪಿತನು ತುಂಬಿದ ಸಭೆಗಳಲ್ಲಿಯೂ ಸಹ ಮನಬಂದಂತೆ ಒದರಹತ್ತುತ್ತಾನೆ. ಆಪ್ತರನ್ನಾಗಿ ಮಾಡಿ, ಅವರ ಸ್ನೇಹದಿಂದಲೂ ವಂಚಿತನಾಗಿ ಹೋಗುತ್ತಾನೆ. ಒಂದೇ ವಾಕ್ಯದಲ್ಲಿ ಹೇಳಬೇಕೆಂದರೆ, ಮಾನವನನ್ನು ದಾನವನನ್ನಾಗಿ ಮಾಡುವ ರಾಕ್ಷಸೀ ವೃತ್ತಿಯೇ ಕ್ರೋಧ–ದಾನವತ್ವದ ಅಂತ್ಯವಾಗುವುದು ಸರ್ವನಾಶದಲ್ಲಿಯೇ. ನಾವು ಈ ಗೀತಾ ಶ್ಲೋಕವನ್ನು ನೆನಪಿನಲ್ಲಿಡಬಹುದು:-

**ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ಸ್ಮೃತಿ ವಿಭ್ರಮಃ।**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥**

[ಗೀತಾ :– ೨–೬೩]

"ಕ್ರೋಧದಿಂದ ಸಂಮೋಹ ಉಂಟಾಗುತ್ತದೆ. ಸಮ್ಮೋಹದಿಂದ ಸ್ಮೃತಿಯಲ್ಲಿ ದೋಷ ಹುಟ್ಟುವುದು. ಸ್ಮೃತಿಭ್ರಂಶದಿಂದ–ಸ್ಮೃತಿಯು ಪತನದಿಂದ ಬುದ್ಧಿಯು ನಾಶಹೊಂದುವುದು. ಬುದ್ಧಿ ನಾಶದಿಂದ ಮಾನವನು ನಷ್ಟ-ಭ್ರಷ್ಟನಾಗಿ ಹೋಗುತ್ತಾನೆ." ವಸ್ತುತಃ ಮಾನವನ ಮಾನವತ್ವ ನಿಹಿತವಾಗಿರುವುದೇ ಬುದ್ಧಿಯ ಬಲದಲ್ಲಿ. ಕ್ರೋಧ ಬಂದಿತೆಂದರೆ–ವಿವೇಕ ನಾಶ ಹೊಂದುತ್ತದೆ. ವಿವೇಕ ನಾಶವಾದರೆ–ಹಿಂದೆ ಕಲಿತುದೆಲ್ಲಾ, ಹಿಂದೆ ತಿಳಿದುದೆಲ್ಲಾ ಮರೆತುಹೋಗುತ್ತದೆ. ಈ ಸ್ಥಿತಿ ಬಂದಮೇಲೆ, ಬುದ್ಧಿ ಕೆಲಸ ಮಾಡದೇ ಹೋಗುವುದು. ಇನ್ನು ಪಶುತ್ವವಲ್ಲದೆ ಮಾನವತ್ವಕ್ಕೆ ಅವಕಾಶವೆಲ್ಲಿದೆ? ತಮ್ಮ ಸ್ವಂತ ಸೋದರರು–ಮಕ್ಕಳು, ಸೋದರಿಯರು, ಹೆಂಡತಿಯರು–ಇವರನ್ನೂ ಸಹ ಹಿಂದುಮುಂದು ನೋಡದೇ ಚುಚ್ಚುತ್ತಿರುವ ಕ್ರೋಧಿಗಳನ್ನು ನಾವು ಎಷ್ಟು ಸಾರಿ ನೋಡಿಲ್ಲ?

ಈ ರೀತಿ. ಉಲೂಕಯಾತುವಿನ ಮಗ್ಗುಲಲ್ಲಿ ನಿಂತ ಶುಶುಲೂಕಯಾತು ಎಂಬ ರಕ್ಷಸ್ಸು ಮಹಾ ಪ್ರಬಲವಾಗಿ, ಮಾನವರನ್ನೂ ದಾನವರನ್ನಾಗಿ ಮಾಡಿಬಿಡುವ ಮಹಾಪಾಪಿಯಾಗಿದೆ. ಈ ರಕ್ಷಸ್ಸನ್ನು ಬಲಿಹಾಕುವುದು ಹೇಗೆ? ಮನಸ್ಸನ್ನು ಕಂಪನದ ಸ್ಥಿತಿಯಿಂದ ದೂರವಿಡುವುದು, ಅದು ಉದ್ವೇಗಕ್ಕೆ ಸಿಕ್ಕದಂತೆ ನೋಡಿಕೊಳ್ಳುವುದು. ಇದೇ ಕ್ರೋಧ – ವಿಜಯದ ಮಾರ್ಗ. ಈಗ ನೋಡೋಣ - ಕೋಪವನ್ನು ಗೆಲ್ಲಲು ವೇದ ತೋರಿಸುವ ಮಾರ್ಗವನ್ನು : —

**ಸಮುದ್ರ ಮಾಸಾಮುವತಸ್ಥೇ ಅಗ್ರಿಮಾ ನ ರಿಷ್ಯತಿ ಸವನಂ**
**ಯಸ್ಮಿನ್ನಾಯತಾ । ನ ಅತ್ರಾ ಹಾರ್ದಿ ಕ್ರವಣಸ್ಯ ರೇಜತೇ**
**ಯತ್ರಾಮತಿರ್ವಿದ್ಯತೇ ಪೂತಬಂಧನೀ ॥** (ಋ. :– ೫–೪೪–೯)

[ಆಸಾಂ–ಈ ಪ್ರಜೆಗಳಿಗೆ, (ಸಮುದ್ರಂ) ಸಾಗರವು, (ಅಗ್ರಿಮಾ) ಮಾದರಿಯಾಗಿ, (ಅವತಸ್ಥೇ) ನಿಂತಿದೆ. (ಯಸ್ಮಿನ್)ಯಾವುದರಲ್ಲಿ,(ಆಯತಾ) ವಿಶಾಲತೆಯಿರುತ್ತದೋ, (ಆ ಸವನಂ) ರಚನೆಯು, ಕೃತಿಯು, (ನ ರಿಷ್ಯತಿ)

ನಾಶಹೊಂದುವುದಿಲ್ಲ. (ಯತ್ರ) ಎಲ್ಲಿ, (ಮತಿಃ) ಮನಸ್ಸು. (ಪೂತಬಂಧನೀ) ಪವಿತ್ರ ಬಂಧನವುಳ್ಳದ್ದಾಗಿರುತ್ತದೋ, (ತತ್ರ) ಅಲ್ಲಿ, (ಕ್ರವಣಸ್ಯ) ಕರ್ಮ ಮಾಡುವ ಜೀವಾತ್ಮನ, (ಹಾರ್ದಿ) ಹೃದಯವು, ಭಾವನೆಯು, ನ (ರೇಜತೇ) ಉದ್ವಿಗ್ನವಾಗುವುದಿಲ್ಲ."

ಈ ಒಂದು ಮಂತ್ರದಲ್ಲಿ ಮನಸ್ಸಿನ ಉದ್ರೇಕವನ್ನು, ಕ್ರೋಧವನ್ನು ತಡೆಗಟ್ಟುವ ಉಪಾಯವನ್ನು ದೃಷ್ಟಾಂತ ಪೂರ್ವಕವಾಗಿ ವರ್ಣಿಸಿದೆ. ಕೋಪ ಬರುವುದೇಕೆ? **ಹೃದಯದಲ್ಲಿ ಅಲ್ಪತನ ಮನೆ ಮಾಡಿರುವುದರಿಂದ; ವಿಶಾಲವಾದ ಭಾವನೆಯಿಲ್ಲದಿರುವುದರಿಂದ** ಹೃದಯದ ಅಲ್ಪತನ ನಾನಾ ಬಗೆಯದು. "ನಾನು ತಿಳಿದಿರುವಷ್ಟೇ ಜ್ಞಾನ; ಬೇರೆಯವರಿಗೆ ನನಗಿಂತ ಹೆಚ್ಚು ತಿಳುವಳಿಕೆಯಿರಲು ಸಾಧ್ಯವೇ ಇಲ್ಲ."–ಎಂಬ ಭಾವನೆ ಹುಟ್ಟಿದರೆ, ಬೇರೆಯವರು ಹೇಳುವುದನ್ನು ಕೇಳುವ ಸಹನೆಯೂ ಇರುವುದಿಲ್ಲ. ಈ ಅಸಹನೆಯೂ ಕ್ರೋಧವೇ. "ನಾನು ಮಾಡುವುದಷ್ಟೇ ಸತ್ಕರ್ಮ; ಬೇರೆ ಯವರು ಮಾಡುವುದೆಲ್ಲಾ ತಪ್ಪು. ನಾನು ಹೇಳುವುದಷ್ಟೇ ಸತ್ಯ; ಬೇರೆ ಯವರು ಹೇಳುವುದೆಲ್ಲಾ ಸುಳ್ಳು" ಎಂಬ ಭಾವನೆ ಬಲಿತಾಗಲೂ ಕ್ರೋಧ ಮೂಡುವುದು ಸಹಜ. ಎಂದರೆ–"ಜ್ಞಾನ ಅಸೀಮ; ಅದು ಎಲ್ಲರಿಂದಲೂ ನನಗೆ ಲಭಿಸಬಲ್ಲದು; ನನಗೆಂತು ನನ್ನ ಭಾವನೆಗಳನ್ನು ಮಾತುಗಳ ಮೂಲಕ ವ್ಯಕ್ತಪಡಿಸುವ ಮತ್ತು ಕಾರ್ಯತಃ ಆಚರಿಸುವ ಅಧಿಕಾರವಿದೆಯೋ, ಪರ ರಿಗೂ ಅಂತೆಯೇ ಇದೆ"ಎಂಬ ವಿಶಾಲ ಭಾವನೆ ರೂಢಿಸಿದಾಗ, ಕ್ರೋಧ ತನ್ನಷ್ಟಕ್ಕೆತಾನೇ ನಾಶವಾಗಿ ಹೋಗುತ್ತದೆ. ವೇದ ಈ ತತ್ತ್ವವನ್ನೇ – "ಯಾವುದರಲ್ಲಿ ವೈಶಾಲ್ಯವಿದೆಯೋ, ಆ ರಚನೆ ಎಂದಿಗೂ ನಾಶವಾಗದು" – ಎಂದು ವರ್ಣಿಸುತ್ತಲಿದೆ. ವಿಶಾಲ ಮಾನವತ್ವದ, ವಿಶಾಲವಿಶ್ವದ ಭಾವನೆ ಗಳನ್ನು ಬದಿಗೊತ್ತಿ, ಅಂಗೈಯಗಲದ ನೆಲ, ಹಲ ಲಕ್ಷ ಮಂದಿಯಾಡುವ ಭಾಷೆ. ಯಾವನೋ ವ್ಯಕ್ತಿ ಉಪದೇಶಿಸಿದ ಆಚಾರ-ವಿಚಾರಗಳು–ಇವನ್ನೇ ಪ್ರಧಾನವಾಗೆಣಿಸಿ, ಬಾವಿಯಲ್ಲಿನ ಕಪ್ಪೆಯಂತೆ "ಇದೇ ಸರ್ವಸ್ವ" - ಎಂದು ವರ್ತಿಸತೊಡಗಿದರೆ, ಆ "ಚಿಕ್ಕ ಸರ್ವಸ್ವ"ದ ಆಯಕಟ್ಟಿನಲ್ಲಿ ಬಾರದುದರ ಮೇಲೆಲ್ಲಾ ಅಸಹನೆ ಹುಟ್ಟಿಯೇ ತೀರುತ್ತದೆ. ಈ ಅಸಹನೆಯ ಕಾರಣದಿಂದ,

ಅಲ್ಪ ಹೃದಯುದವನು ಮಾಡಿದ ಯಾವ ಕಾರ್ಯವೂ ಸ್ಥಾಯಿಯಾಗಿ ಉಳಿಯದೆ, ಅವನೊಂದಿಗೇ ಅದೂ ನಾಶವಾಗಿ ಹೋಗುತ್ತದೆ. ಆದುದರಿಂದ, ಕ್ರೋಧವನ್ನು ಜಯಿಸಬಯುಸುವ ಧೀರನು,ಮೊದಲು ವಿಶಾಲವಾದ ಸಮುದ್ರವನ್ನು ತನ್ನ ಆದರ್ಶವಾಗಿಟ್ಟುಕೊಳ್ಳಬೇಕು. ಚಿಕ್ಕಕೆರೆಯೋ, ಕುಂಟೆಯೋ ಕೊಳವೋ ಆದರೆ, ಅಲ್ಪ ಸ್ವಲ್ಪ ಕೊಳಕಿನಿಂದಲೇ ಕೊಳೆತು ನಾರಹತ್ತುವುದು; ಸ್ವಲ್ಪ ಮಳೆ ಹೆಚ್ಚಿದರೆ - ಕಟ್ಟೆಯೊಡೆದು ಚೆಲ್ಲಾಡತೊಡಗುವುದು. ಆದರೆ ಸಮುದ್ರ ಹಾಗಲ್ಲ; ಗಂಗಾ ಯಮುನಾ, ಮಿಸೌರಿ – ಮಿಸಿಸಿಪ್ಪಿಗಳಂತಹ ಲಕ್ಷಾಂತರ ನದೀನದಗಳು ನಿರಂತರವಾಗಿ ಬಂದು ಬಂದು ಸೇರುತ್ತಿದ್ದರೂ, ಮೂಸಲಧಾರೆಯ ಮಹಾವೃಷ್ಟಿ ಕರೆಯುತ್ತಿದ್ದರೂ, ತನ್ನ ಗಾಂಭೀರ್ಯವನ್ನು ಕಿಂಚಿತ್ತಾದರೂ ಕಳೆದುಕೊಳ್ಳುವುದಿಲ್ಲ; ತನ್ನಲ್ಲಿ ಸೇರಿದ ಕೊಳಕನ್ನೂ ತೊಳೆದು ಹಾಕಿಬಿಡುವುದು. ಇದೇ ರೀತಿ, ಮಾನವನು ಸಾಂಪ್ರದಾಯಿಕ ಮತೀಯ ಹಾಗೂ ಇತರ ಸಂಕುಚಿತ ಭಾವನೆಗಳಿಂದ ಮೇಲೆದ್ದು 'ಮಹಾಮನಸ್ಕ'ನಾಗಬೇಕು. 'ಮಹಾಮನಸ್ಕ'ನಾಗದೆ ವ್ಯಕ್ತಿಗತ, ಪಾರಿವಾರಿಕ, ಸಾಮಾಜಿಕ, ರಾಷ್ಟ್ರೀಯ, ಜಾಗತಿಕ-ಯಾವುದೇ ಕ್ಷೇತ್ರದಲ್ಲಿಯೂ ಕ್ರೋಧವನ್ನು ತಡೆಗಟ್ಟಲು ಸಾಧ್ಯವಿಲ್ಲ.

ಈಗ ಮುಂದಿನ ಪ್ರಶ್ನೆ - ಈ ಮಹಾಮನಸ್ಕತೆ ಬರುವುದೆಂತು? ವೇದ ಹೇಳುತ್ತಲಿದೆ: — "ಮತಿಯು-ಎಂದರೆ ಪವಿತ್ರವಾದ ಬುದ್ಧಿಯು, ಆಲೋಚನೆಗಳಿಂದ ಕಟ್ಟಲ್ಪಟ್ಟಾಗ, ಮಹಾಮನಸ್ಕತೆ ಲಭಿಸುತ್ತದೆ. ಪವಿತ್ರವಾದ ಆಲೋಚನೆಗಳಿಂದಲೇ ಮನಸ್ಸು ಪವಿತ್ರವೂ, ವಿಶಾಲವೂ ಆಗಬಲ್ಲದು. ಅದು ಪವಿತ್ರವೂ, ವಿಶಾಲವೂ ಆದಾಗಲೇ ಜೀವಾತ್ಮನ ಹೃದಯದ ರೇಜನ ಎಂದರೆ ಅಸಹನೆ ನಾಶ ಹೊಂದುವುದು. ಆದುದರಿಂದ, ಕ್ರೋಧವನ್ನು ಜಯಿಸಬಯುಸುವ ಸಾಧಕನು ಪವಿತ್ರವಾದ ಆಲೋಚನೆಗಳನ್ನು ರೂಢಿಸಿಕೊಂಡುಮನಸ್ಸನ್ನು ವಿಶಾಲವಾಗಿ ಮಾಡಿಕೊಳ್ಳಬೇಕು.

ಈ ರೀತಿ ಮಾಡದೆ, ಕ್ರೋಧವೇ ತನ್ನ ದೊಡ್ಡಸ್ತಿಕೆಯೆಂದರಿತು, ಕಂಡಕಂಡವರ ಮೇಲೆಲ್ಲಾ ರೇಗುತ್ತಾ, ತೋಳನಂತೆ ಸಿಡುಕಾಡುತ್ತಾ ಓಡಾಡು

ತ್ತಿದ್ದರೆ, ಮಾನವತ್ವ ಉಳಿಯುವುದಿಲ್ಲ. **ನೆನಪಿರಲಿ-ಕ್ರೋಧ ದೊಡ್ಡಸ್ತಿಕೆಯ ಕುರುಹಲ್ಲ; ಅದು ತನ್ನ ಅಶಕ್ತತೆಯ, ಅಲ್ಪತನದ ಕುರುಹು ಮಾತ್ರ.** ಮಹಾಭಾರತಕಾರರು ಹೇಳಿಯೇ ಇದ್ದಾರೆ :—

**ಶಕ್ತಸ್ತು ಕ್ಷಮತೇ ನಿತ್ಯಂ ಅಶಕ್ತಃ ಕ್ರುಧ್ಯತೇ ನರಃ ।**

[ಆದಿಪರ್ವ : —೮೭-೯]

"ಸಮರ್ಥನಾದವನೇ ಕ್ಷಮಾಶೀಲನು-ಸಹನಶೀಲನು-ಆಗಿರುತ್ತಾನೆ. ಅಶಕ್ತನಾದವನೇ ಕೋಪಮಾಡಿಕೊಳ್ಳುತ್ತಾನೆ." ಇದೊಂದು ನಿತ್ಯಸತ್ಯ. ಏಕೆಂದರೆ-ಕ್ರೋಧ ಮನಸ್ಸಿನ ಅಲ್ಪತನದಿಂದ ಉದ್ಭವಿಸುವ ಗುಣ. ಅದು ಸ್ವಾಭಾವಿಕವಾದ ಗುಣವಲ್ಲ; ನೈಮಿತ್ತಿಕವಾದ ಗುಣ. ಬೇರೆ ನಿಮಿತ್ತಗಳಿಂದ ಪ್ರಭಾವಿತನಾಗುವುದು-ಕ್ರೋಧದಂತಹ ಅಶಾಂತಿಜನಕವಾದ ಪರಿಣಾಮಕ್ಕೆ ತಲೆಬಾಗುವುದು ಸಮರ್ಥನ ಲಕ್ಷಣವೇ ಅಲ್ಲ; ದುರ್ಬಲನಿಗೇ ಕೋಪ ಬರುವುದು ಹೆಚ್ಚು. ಮನಸ್ಸು ಎಷ್ಟು ಬಲವಾಗಿರುವುದೋ, ಕೋಪವು ಅಷ್ಟೂ ಕಡಿಮೆಯಾಗುತ್ತಾ ಹೋಗುವುದು. ಆದುದರಿಂದ, ಮಾನವರೇ, ಬನ್ನಿರಿ.

ಈ ತೋಳನ ನಡೆಯನ್ನು ಬಲಿಹಾಕಲು ಸಂಕಲ್ಪಮಾಡಿ ಮುಂದಕ್ಕಡಿಯಿಡೋಣ. **"ನಾಸ್ತಿ ಕ್ರೋಧಸಮೋ ವಹ್ನಿಃ"** – ಕ್ರೋಧಕ್ಕೆ ಸಮಾನವಾದ ಬೆಂಕಿ ಬೇರಾವುದೂ ಇಲ್ಲ. ಕ್ರೋಧದಿಂದ ಕ್ರೋಧ ಬೆಳೆಯುತ್ತಲೇ ಹೋಗುತ್ತದೆ; ಅದು ಕಡಿಮೆಯಾಗುವುದಿಲ್ಲ. ಆದುದರಿಂದ, ಬೇರೆಯವರು ನಮ್ಮ ಮೇಲೆ ಕನಲಿದರೂ ಸಹ, ನಮಗೆ ಅಪಶಬ್ದಗಳನ್ನಾಡಿದರೂ ಸಹ. ನಾವು ಕನಲದಿರೋಣ. ನಮ್ಮ ಬಾಯಿನಿಂದ ಹೊಲಸು ಮಾತುಗಳು ಹೊರಡದಿರಲಿ. ಮಹರ್ಷಿ ದಯಾನಂದರಂತೆ, ನಾವೂ ಸಹ, ಕನಲಿದವರ ಮೇಲೆ ಶಾಂತಿಜಲವನ್ನೆರಚುವ, ಬೈಯುವವರನ್ನು ಅಭಿನಂದಿಸುವ ಮಹಾಮನಸ್ಕತೆಯನ್ನು ಅಭ್ಯಾಸ ಮಾಡಿಕೊಳ್ಳೋಣ. ನಾವು ಶಾಂತರಾಗಿ, ಜಗತ್ತಿನಲ್ಲಿಯೂ ಶಾಂತಿಯನ್ನು ಹರಡಲು ಯತ್ನಿಸೋಣ. ಬನ್ನಿ ಈ ವೇದಾದೇಶವನ್ನು ಹೃದಯಾಂಕಿತವಾಗಿ ಮಾಡಿಕೊಳ್ಳೋಣ :—

**ಮಾ ನೋ ಹಿಂಸೀರಧಿ ನೋ ಬ್ರೂಹಿ ಪರಿ ಣೋ ವೃಂಗ್ಧಿ ಮಾ ಕ್ರುಧಃ । ಮಾ ತ್ವಯಾ ಸಮರಾಮಹಿ ॥**

[ಅಥರ್ವ :– ೧೧–೨–೨೦]

[ಹೇ ಮಾನವ! (ನಃ) ನಮ್ಮನ್ನು, (ಮಾ ಹಿಂಸೀಃ) ಹಿಂಸಿಸಬೇಡ. (ನಃ) ನಮ್ಮೊಂದಿಗೆ, (ಅಧಿಬ್ರೂಹಿ) ಪ್ರೇಮದಿಂದ ಮಾತನಾಡು. (ನಃ) ನಮ್ಮನ್ನು (ಪರಿ) ಎಲ್ಲೆಡೆಯಿಂದಲೂ (ವೃಂಗ್ಧಿ) ಸ್ವೀಕರಿಸು. (ಮಾ ಕ್ರುಧಃ) ಎಂದಿಗೂ ಕೋಪಮಾಡಿಕೊಳ್ಳಬೇಡ. ನಾವು, (ತ್ವಯಾ) ನಿನ್ನೊಂದಿಗೆ, (ಮಾ ಸಮರಾಮಹಿ) ಕಾದಾಡದಿರೋಣ] ಕ್ರೋಧದಿಂದಲೇ ಹಿಂಸೆ; ಕ್ರೋಧದಿಂದಲೇ ಒರಟು ಮಾತು; ಕ್ರೋಧದಿಂದ ಕಚ್ಚಾಟ. ಆದಕಾರಣ, ಬನ್ನಿರಿ, **"ಶುಶುಲೂಕಯಾತುಂ ಜಹಿ"** - ತೋಳನ ನಡೆಯನ್ನು-ಕ್ರೋಧವನ್ನು-ಬಲಿ-ಹಾಕು" ಎಂಬ ವೇದಾಜ್ಞೆಯಂತೆ ನಡೆಮ, ಶಾಂತಿಯ ಅಮೃತ ವೃಷ್ಟಿಯನ್ನು ಸುರಿಸೋಣ.

೭

# ನಾಯಿಯ ನಡೆಯನ್ನು ಬಲಿಹಾಕು

ಎರಡು ರಕ್ಷಸ್ಸುಗಳನ್ನು ಕಂಡುದಾಯಿತು. ಈಗ ಮೂರನೆಯದರ ಪರಿಚಯ ಮಾಡಿಕೊಳ್ಳೋಣ, ಬನ್ನಿ. ಪುನಃ ಅದೇ ವೇದಮಂತ್ರದ ಕಡೆ ಗಮನ ಕೊಡೋಣ :—

**ಜಹಿ ಶ್ವಯಾತುಂ ಜಹಿ ಶ್ವಯಾತು** [ಋ. :– ೭-೧೦೪-೨೨]

[ಶ್ವಯಾತುಂ – ನಾಯಿಯ ನಡೆಯನ್ನು, ಜಹಿ – ಹೊಡೆದು ಹಾಕು.]

ಈ ಮಂತ್ರದಲ್ಲಿ ಹೇಳಲ್ಪಟ್ಟಿರುವ ಮೂರನೆಯ ರಕ್ಷಸ್ಸು–ಶ್ವಯಾತು. ಶ್ವಾ–ಎಂದರೆ–ನಾಯಿ; ಯಾತು – ಎಂದರೆ ನಡೆ. ಆದುದರಿಂದ, ಶ್ವಯಾತು-ಎಂದರೆ ನಾಯಿಯ ನಡೆ ಎಂದಾಯಿತು. ನಾಯಿಯನ್ನು ಕಾಣದವರಾರು? ಅದರ ನಡೆ ಯಾವುದು? ಸ್ವಲ್ಪ ಆಲೋಚಿಸಿರಿ. ನಾಯಿ –| ಎಂದ ಕೂಡಲೇ

ಜನರಿಗೆ ನೆನಪಾಗುವುದು ಅವರ ಸ್ವಾಮಿಭಕ್ತಿ; ಯಜಮಾನನಿಗಾಗಿ ಜೀವವನ್ನಾದರೂ ತೆರುವ ಭಾವನೆ ಕೃತಜ್ಞತಾ ಭಾವನೆ ಅಲ್ಲವೇ? ಆದರೆ ವೇದ ರಕ್ಷಸ್ಸು ಎಂದು ಕರೆಯುತ್ತಿರುವುದು ಈ ದಿವ್ಯವಾದ ಕೃತಜ್ಞತಾಭಾವನೆಯನ್ನಲ್ಲ. ಕೃತಜ್ಞತೆ ಅವಗುಣವಲ್ಲ. ಆದರೆ ಅದೇ ಕೃತಜ್ಞತೆ ರೂಪಗೆಟ್ಟು, ದೈನ್ಯವಾಗುವ ಪಕ್ಷದಲ್ಲಿ, ತನ್ನ ಆತ್ಮಗೌರವಕ್ಕೇ ಮಣ್ಣೆರಚುವಂತಾದಲ್ಲಿ - ಅದೂ ಅವಗುಣವೇ ಆದೀತು. ಇಲ್ಲಿ ನೋಡಿ-ಕವಿ ಭರ್ತೃಹರಿಯಿಂದ ಚಿತ್ರಿತವಾದ ನಾಯಿಯ ಸ್ವರೂಪವನ್ನು :—

**ಲಾಂಗೂಲಚಾಲನಮಧಶ್ಚರಣಾವಪಾತಂ ಭೂಮೌ ನಿಪತ್ಯ ವದನೋದರದರ್ಶನಂ ಚ । ಶ್ವಾಪಿಂಡದಸ್ಯ ಕುರುತೇ ಗಜಪುಂಗವಸ್ತು ಧೀರಂ ವಿಲೋಕಯತಿ ಚಾಟುಶತೈಶ್ಚ ಭುಂಕ್ತೇ॥**

[ನೀತಿಶತಕ]

"ತನಗೊಂದು ತುತ್ತು ಹಾಕುವವನ ಮುಂದೆ ನಾಯಿ ಬಾಲವಾಡಿಸುತ್ತದೆ; ಕಾಲಮೇಲುರುಳಾಡುತ್ತದೆ; ನೆಲಕ್ಕುರುಳಿ ಮುಖಮುಖ ನೋಡುತ್ತದೆ; ಹೊಟ್ಟೆ ತೋರಿಸುತ್ತದೆ. ಆದರೆ – ಗಜರಾಜನಾದರೋ ಠೀವಿಯಿಂದ ನೋಡುತ್ತಾ ನಿಲ್ಲುತ್ತಾನೆ; ನೂರು ಸಾರಿ ಹುರಿದುಂಬಿಸಿದ ಮೇಲೆಯೇ ತಿನ್ನುತ್ತಾನೆ"

ಎಂತಹ ಭೀಕರ ದೈನ್ಯದಚಿತ್ರ-ನಾಯಿಯದು. ಇಲ್ಲಿ ಆತ್ಮಗೌರವದ ವಾಸನೆಯೇ ಇಲ್ಲ. ಇದೇ ನಾಯಿಯ ಸಾಕಾದಷ್ಟು ಹೇಯವಾದ ಗುಣ. ಆದರೆ-ವೇದ ಹೇಳುತ್ತಿರುವುದು ಇದನ್ನು ಮಾತ್ರವಲ್ಲ, ನಾಯಿಗೆ ಹೊಟ್ಟೆ ತುಂಬಿರಲಿ. ತುಂಬದಿರಲಿ; ಯಾವ ಸುಖವೇ ಪ್ರಾಪ್ತವಾಗಿರಲಿ; ಅದು ಬೇರೆ ನಾಯನ್ನು ಕಂಡರೆ – "ಗುರ್" ಎಂದು ಉರಿದು ಬೀಳದೆ ಇರುವುದಿಲ್ಲ. ಅದಕ್ಕೆ ಸಜಾತೀಯವಾದ ಇನ್ನೊಂದು ನಾಯಿಯ ಉತ್ಕರ್ಷ ಸ್ವಲ್ಪವೂ ಹಿಡಿಸುವುದಿಲ್ಲ. ಈ ಮತ್ಸರವನ್ನೇ-ಹೊಟ್ಟೆಯ ಕಿಚ್ಚನ್ನೇ-ವೇದ 'ಶ್ವಯಾತು' ಎಂದು ನಿರ್ದೇಶಿಸುತ್ತಿರುವುದು. ನಾಯಿಯ ಹೊಟ್ಟೆಯ ಕಿಚ್ಚು ಎಷ್ಟು ಪ್ರಸಿದ್ಧವಾಗಿದೆ! ನಾಯಿಯ ನಡೆ–ಎಂದರೆ, ಮುಖ್ಯತಃ ಈರ್ಷ್ಯೆಯೇ.

ಈರ್ಷ್ಯೆಬಲಿತಾಗ, ದೈನ್ಯ – ಬೇರೆಯವರ ಚಪ್ಪಲಿಗಾದರೂ ಮುತ್ತಿಡುವ ಕುತ್ಸಿತ ಮನೋಭಾವ, ತಾನಾಗಿಯೇ ತಲೆದೋರುವುದು. ಪೃಥ್ವೀರಾಜನ ಉತ್ಕರ್ಷ ಸಹಿಸದೆ ಜಯಚಂದನು ಮಹಮ್ಮದ್ ಗೋರಿಗೆ ಸಲಾಂ ಹೊಡೆದು, ಭಾರತದ ಹಲವಾರು ಶತಮಾನಗಳ ದಾಸ್ಯಕ್ಕೆ ಕಾರಣವಾದ ದುರ್ಘಟನೆ ಯಾರಿಗೆ ಗೊತ್ತಿಲ್ಲ? ಮಹಾತ್ಮಾ ಗಾಂಧೀಯವರಂತಹ ರಾಷ್ಟ್ರ ನಾಯಕರ ನೇತೃತ್ವದಲ್ಲಿ ಭಾರತೀಯರು ಪ್ರಾಣಪಣದಿಂದ ಸ್ವಾತಂತ್ರ್ಯಕ್ಕಾಗಿ ಹೋರಾಡು ತ್ತಿದ್ದಾಗ, ಭಾರತೀಯರೇ ಆದ ಹಲವರು ಬ್ರಿಟಿಷರ ಪಾದತಳವನ್ನು ಸ್ಪರ್ಶಿಸಿ, ಸ್ವಾತಂತ್ರ್ಯದ ಆಗಮನವನ್ನು ಹಲಕಾಲಕ್ಕಾದರೂ ತಡೆಯಲು ಯತ್ನಿಸಿದು ದನ್ನು ನಾವು ಮರೆತಿದ್ದೇವೆಯೇ? ವಸ್ತುತಃ ಈ ಶ್ವಯಾತಾ ಈ ನಾಯಿಯ ನಡೆ ಈ ಈರ್ಷ್ಯೆ ಮಾನವನ ಮಾನವತ್ವಕ್ಕೇ ಪೂರ್ಣತಃ ಸೊನ್ನೆಸುತ್ತುವ ಮಹಾವ್ಯಾಧಿಯೇ ಆಗಿದೆ. ಕೈಕೆಯ ಈರ್ಷ್ಯೆ ರಾಮಾಯಣದ ದುರಂತಕ್ಕೆ, ಕೌರವರ ಈರ್ಷ್ಯೆ ಮಹಾಭಾರತದ ದುರಂತಕ್ಕೆ ಮೂಲವಾಯಿತು – ಎಂಬು ದನ್ನು ಯಾರು ತಾನೇ ಅರಿಯರು? ರಾಷ್ಟ್ರೀಯ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲೆಂತೋ, ಪಾರಿವಾರಿಕ ಹಾಗೂ ವ್ಯಕ್ತಿಗತ ಕ್ಷೇತ್ರಗಳಲ್ಲಿಯೂ ಅಂತೇ ಈ ಹೊಟ್ಟೆಯ ಕಿಚ್ಚು ಸರ್ವ ನಾಶದ ಸಂದೇಶವಾಹಕವಾಗಿರುತ್ತದೆ.

ನಾಯಿಯ ನಡೆ ಎಂದರೇನು? ಹೊಟ್ಟೆಯ ಕಿಚ್ಚಿನ ಸ್ವರೂಪವೇನು? "ತಾನು ಮಾತ್ರ ಮುಂದಕ್ಕೆ ಬರಬೇಕು; ಬೇರಾರೂ ತನಗಿಂತ ಮುಂದಕ್ಕೆ ಹೋಗುವುದಂತಿರಲಿ; ತನಗೆ ಸರಿಸಮನಾಗಿಯೂ ನಿಲ್ಲಬಾರದು." – ಎಂಬ, ಅನ್ಯರ ಉತ್ಕರ್ಷವನ್ನು, ಬೇರೆಯವರ ಅಭ್ಯುದಯವನ್ನು ಸಹಿಸಲಾರದ ತುಚ್ಛವಾದ ಮನೋಭಾವವೇ ಹೊಟ್ಟೆಯ ಕಿಚ್ಚು. ಅಭ್ಯುದಯ–ಎಂಬುದು ಕೇವಲ ಹಣಕಾಸಿನ ಅಥವಾ ಮನೆ – ಮಾರಿನ ವಿಷಯವಲ್ಲ. ವಿದ್ವತ್ತ್ವ, ಯಶಸ್ಸು, ಅಧಿಕಾರ, ಜನಾದರಣೆ- ಈ ಎಲ್ಲ ಕ್ಷೇತ್ರಗಳಲ್ಲಿಯೂ ಅಭ್ಯುದಯ ವಾಗುತ್ತದಷ್ಟೆ? ಆದುದರಿಂದ, ಈರ್ಷ್ಯೆ ಕೇವಲ ಆರ್ಥಿಕ ಉತ್ಕರ್ಷವನ್ನು ಸಹಿಸಲಾರದ ಮನೋಭಾವವಲ್ಲ. ಬೇರೆಯವರಿಗೆ ಕೀರ್ತಿ ಸಿಕ್ಕಿದರೆ, ಪಾಂಡಿತ್ಯ ಲಭಿಸಿದರೆ, ಅಧಿಕಾರ ಪ್ರಾಪ್ತವಾದರೆ, ಲೋಕ ಪ್ರೀತಿಯುಂಟಾದರೆ – "ಅಯ್ಯೋ! ಅವನು ತನಗಿಂತ ಮುಂದಾದನಲ್ಲ; ಹೇಗಾದರೂ ಮಾಡಿ ಅವನ

ಕಾಲು ಮುರಿಯಬೇಕು." ಎಂದು ಹೇಳುತ್ತದೆ-ಈರ್ಷ್ಯಾಳುವಿನ, ಮತ್ಸರ ಗ್ರಸ್ತನ. ಹೊಟ್ಟೆಯ ಕಿಚ್ಚಿನವನ ಹೃದಯ! ಇಂತಹ ಕೀಳುಮಟ್ಟಕ್ಕಿಳಿದ ಮೇಲೆ-ಮಾನವತ್ವದ ಆದರ್ಶಸಿದ್ಧಿ ಕನಸಿಸಲ್ಲಾದರೂ ಸಾಧ್ಯವೇ? ಮಾನವತ್ವದ ಆಧಾರ ಆತ್ಮೌಪಮ್ಯದೃಷ್ಟಿ-ಎಂದು ಹೇಳಿಯೇ ಇದ್ದೇವೆ. ಹೊಟ್ಟೆಯ ಕಿಚ್ಚು ಇಂತಹ ಉದಾರ ಮನೋಭಾವ ಬೆಳೆಯಲು ಅವಕಾಶ ಕೊಡುವುದೇ ವೇದವು, ಹೊಟ್ಟೆಯಕಿಚ್ಚನ್ನು ಹೀಗೆ ವರ್ಣಿಸುತ್ತದೆ :-

**ಈರ್ಷ್ಯಾಯಾ ಧ್ರಾಜಿಂ ಪ್ರಥಮಾಂ ಪ್ರಥಮಸ್ಯಾ ಉತಾಪರಾಂ।**
**ಅಗ್ನಿಂ ಹೃದಯ್ಯಂ ಶೋಕಂ ತಂ ತೇ ನಿರ್ವಾಪಯಾಮಸಿ ॥**

[ಅಥರ್ವ :- ೬-೧೮-೧]

[ಈರ್ಷ್ಯಾಯಾಃ ಹೊಟ್ಟೆಯ ಕಿಚ್ಚಿನ, (ಪ್ರಥಮಾಂ) ಮೊದಲನೆಯ, (ಉತ) ಹಾಗೆಯೇ (ಪ್ರಥಮಸ್ಯಾಃ) ಮೊದಲನೆಯದರ, (ಅಪರಾಂ) ಅನಂತರದ (ಧ್ರಾಜಿಂ) ಬಿರುಸನ್ನು, ಉದ್ವೇಗವನ್ನು (ತೇ) ನಿನ್ನ (ತಂ) ಆ (ಹೃದಯ್ಯಂ) ಹೃದಯದ (ಶೋಕಂ) ಶೋಚನೀಯವಾದ (ಅಗ್ನಿಂ) ಕಿಚ್ಚನ್ನು (ನಿರ್ವಾಪಯಾಮಸಿ) ದೂರೀಕರಿಸುತ್ತೇವೆ.] ಅಸೂಯೆಯಿಂದ. ಹೊಟ್ಟೆಯ ಕಿಚ್ಚಿನಿಂದ ಬೇಯುತ್ತಿರುವವನಿಗೆ ಹೇಳುವ ಮಾತುಗಳಿವು. ವೇದ ಈ ಮಂತ್ರದಲ್ಲಿ ಈರ್ಷ್ಯೆಯ ಸ್ವರೂಪವನ್ನು ಬಣ್ಣಿಸಿದೆ. ಕ್ರಿಯೆ-ಪ್ರತಿಕ್ರಿಯೆಯ ನೈಸರ್ಗಿಕ ನಿಯಮಕ್ಕೆ ಈರ್ಷ್ಯೆಯೂ ಹೊರತಲ್ಲ. 'ಈರ್ಷ್ಯಾಯಾಃ ಪ್ರಥಮಾ ಧ್ರಾಜಿಃ' – ಎಂದರೆ, ಬೇರೆಯವರ ಬಗ್ಗೆ ನಮಗೆ ಹುಟ್ಟುವ ಅಸೂಯೆಯ ಪ್ರತಿಕ್ರಿಯಾರೂಪವಾಗಿ, ನಮ್ಮಲ್ಲಿ-ಉದ್ವೇಗ ಹುಟ್ಟುವುದು. ಇಂತಹ ಎರಡನೆಯ ಹಂತದ – ಪ್ರತಿಕ್ರಿಯಾರೂಪವಾದ ಉದ್ವೇಗವನ್ನು ವೇದ, "ಪ್ರಥಮಸ್ಯಾಃ ಅಪರಾ ಧ್ರಾಜಿಃ" - "ಮೊದಲನೆಯದರ ನಂತರ ಉದ್ಭವಿಸುವ ಉದ್ವೇಗ-ಎನ್ನುತ್ತಿದೆ. ಕ್ರಿಯಾರೂಪವಾಗಲೀ, ಪ್ರತಿಕ್ರಿಯಾ ರೂಪವಾಗಲೀ ಈರ್ಷ್ಯೆಯ ಗುಣದಲ್ಲಿ ವ್ಯತ್ಯಾಸವೇನೂ ಆಗದು. ಎರಡು ವಿಧದ ಈರ್ಷ್ಯೆಗಳೂ ವೇದದ ಮಾತಿನಲ್ಲಿ **"ತೇ ಹೃದಯ್ಯಃ ಶೋಕಃ ಅಗ್ನಿಃ"** – "ನಿನ್ನ ಹೃದಯದ ದಹನಕಾರಿಯಾದ ಅಥವಾ ಶೋಚನೀಯವಾದ ಕಿಚ್ಚೇ" ಸರಿ.

ನಾವು ಕನ್ನಡದಲ್ಲಿ 'ಹೊಟ್ಟೆಯ ಕಿಚ್ಚು' – ಎನ್ನುತ್ತೇವೆ; ಅದು ಮಾನುಷ ವರ್ಣನೆ. ವೇದದ ದಿವ್ಯ ಹಾಗೂ ವೈಜ್ಞಾನಿಕ ವರ್ಣನೆಯ ಪ್ರಕಾರ ಅದು ಹೃದಯದ ಕಿಚ್ಚು. ಹೃದಯವೇ ಭಾವನೆಗಳ ಉದ್ಗಮ ಸ್ಥಾನವಾದುದರಿಂದ, ಈ ವೈದಿಕ ಪ್ರಯೋಗ ಹೆಚ್ಚು ಮಾನ್ಯ; ಹೆಚ್ಚು ಆದರಣೀಯ.

ಈ ಹೃದಯದ ಕಿಚ್ಚನ್ನು, ಈ ಶೋಚನೀಯವಾದ, ದಹನಕಾರಿಯಾದ ಹೊಟ್ಟೆಯುರಿಯನ್ನು ಏತಕ್ಕಾಗಿ ದೂರೀಕರಿಸಬೇಕು? ಈ ಪ್ರಶ್ನೆಗೆ ವೇದವೇ ಉತ್ತರ ಕೊಡುತ್ತಲಿದೆ :–

**ಅದೋ ಯತ್ತೇ ಹೃದಿಶ್ರಿತಂ ಮನಸ್ಕಂ ಪತಯಿಷ್ಣುಕಂ ।**
**ತತಸ್ತ ಈರ್ಷ್ಯಾಂ ಮುಂಚಾಮಿ ನಿರೂಷ್ಮಾಣಂ ದೃತೇರಿವ ॥**

[ಅಥರ್ವ : ೬–೧೮–೩]

ಓ ಮಾನವ! (ತೇ) ನಿನ್ನ (ಹೃದಿ) ಹೃದಯದಲ್ಲಿ, (ಶ್ರಿತಂ) ಆಸರೆ ಹೊಂದಿರುವ, (ಮನಸ್ಕಂ) ಮನಸ್ಸಿಗೆ ಇಳಿದಿರುವ, (ಪತಯಿಷ್ಣುಕಂ) ಕೆಳಗೆ ಬೀಳಿಸುವಂತಹ, ಒಬ್ಬರಿಂದ ಒಬ್ಬರ ಕಡೆಗೆ ಹಾರಾಡುವ, (ಅದಃ) ಈ, (ಯತ್) ಯಾವ ಈರ್ಷ್ಯೆಯಿದೆಯೋ, ಆ, (ತೇ) ನಿನ್ನ (ಈರ್ಷ್ಯಾಂ) ಅಸೂಯೆಯನ್ನು (ತತಃ) ಹೃದಯ ಮನಸ್ಸುಗಳಿಂದ, (ಊಷ್ಮಾಣಂ) ಬಿಸುಪನ್ನು (ದೃತೇಃ ಇವ) ಮೋಡದಿಂದ ದೂರೀಕರಿಸುವಂತೆ, (ನಿರ್ಮುಂಚಾಮಿ) ಹೊರ ಹೊರಡಿಸುತ್ತೇನೆ.

ಮಹಾಮನನಾರ್ಹವಾದ ಮಂತ್ರವಿದು. ಈರ್ಷ್ಯೆ ಹುಟ್ಟುವುದು ಹೃದಯದಲ್ಲಿ; ಆಮೇಲೆ ಅದು ಮನಸ್ಸನ್ನು ಆವರಿಸುತ್ತದೆ. ಆಗ ಮನಸ್ಸು ದುರಾಲೋಚನೆಗಳಿಂದ ತುಂಬಿ ಹೋಗಿ, ಯಾರ ಉತ್ಕರ್ಷದ ಬಗ್ಗೆ ನಮಗೆ ಅಸೂಯೆ ಹುಟ್ಟುವುದೋ, ಅವರನ್ನು ಕೆಳಗೆ ಕೆಡಹುವ ಉದ್ಯಮಕ್ಕೆ" ದುಷ್ಕಾರ್ಯಗಳಿಗೆ ಕೈ ಹಾಕುತ್ತೇವೆ. ಬೇರೆಯವರನ್ನು ಕೆಳಗೆ ಕೆಡಹುವ ಈ ನಮ್ಮ ದುಷ್ಪ್ರವೃತ್ತಿ, ಅವರ ಪತನದೊಂದಿಗೇ ಮುಕ್ತಾಯವಾಗುವುದಿಲ್ಲ; ಆದರೆ ಅವರ ಹೃದಯವನ್ನು ಆಕ್ರಮಿಸುತ್ತದೆ. ಅವರ ಮನಸ್ಸನ್ನೂ ಆವರಿಸಿ

ಮರಳಿ ವಿಷ – ಚಕ್ರವನ್ನಾರಂಭಿಸುತ್ತದೆ. ಅವರು ನಮ್ಮನ್ನು ಕೆಡಹುವ ಪ್ರಯತ್ನವನ್ನು ನಡೆಸುತ್ತಾರೆ. ಹೀಗೆ ಈರ್ಷ್ಯೆ ಕೇವಲ ಈರ್ಷ್ಯಾಪಾತ್ರನನ್ನು ಮಾತ್ರವಲ್ಲ; ಈರ್ಷ್ಯಾಳುವನ್ನೂ ಸಹ ಪತನ ಕೂಪಕ್ಕೆ ತಳ್ಳುತ್ತದೆ. ಹೀಗೆ ಒಬ್ಬೊಬ್ಬರನ್ನೊಬ್ಬರು ಕೆಡಹುವ ಮಹಾಕಾರ್ಯದ ಸಂಚಾಲನದಲ್ಲೇ ಮಾನವಜಾತಿ ನಿರತವಾಗಿದ್ದರೆ – ಸೌಮನಸ್ಯ, ಸೌಹಾರ್ದ, ಪ್ರೇಮ. ವಿಶ್ವಾಸ. ಕರುಣೆ, ನ್ಯಾಯ - ಈ ಮೊದಲಾದ ದೈವೀ ಗುಣಗಳ ವಿಕಾಸವಾಗಲು, "ಎಲ್ಲರೂ ತನ್ನಂತೆ" ಎಂಬ ಉದಾತ್ತ ಭಾವನೆ ಬೆಳೆಯಲು ಅವಕಾಶವೆಲ್ಲಿ? ಇನ್ನು ಈ ಪೃಥ್ವೀ ನರಕವಾಗದೇ ಮತ್ತೇನಾದೀತು? ಆದ ಕಾರಣವೇ, ವೇದಮಂತ್ರ ಶ್ವಯಾತುವನ್ನು – ನಾಯಿಯ ನಡೆಯನ್ನು- **'ರಕ್ಷರಕ್ಷಸ್ಸು'** ಎಂದು ಕರೆದು **"ಜಹಿ ಶ್ವಯಾತುಂ"** - "ಬಲಿಹಾಕು ಈ ಹೊಟ್ಟೆಯ ಕಿಚ್ಚನ್ನು" ಎಂದು ಸಾರುತ್ತಿರುವುದು.

ಈರ್ಷ್ಯೆಯನ್ನು ಸಾಯಬಡೆಯಲು ಸಾಧನವನ್ನೂ ಸಹ ವೇದ ತೋರಿಸುತ್ತಲಿದೆ. **"ಉಷ್ಮಾಣಂ ದ್ವತೇಃ ಇವ"** – "ಮೋಡದಿಂದ ಬಿಸುಪನ್ನು ದೂರೀಕರಿಸುವಂತೆ"–ಎಂಬ ಉಪಮಾನ ಅತಿಭವ್ಯವಾದುದು. ಜಲದ ಆವಿರೂಪವೇ ತಾನೇ ಮೋಡ; ಅದುಂಟಾಗಿರುವುದು ಕಾವಿನಿಂದಲೇ ಅಲ್ಲವೇ? ಅದು ತಂಪಾದಗಾಳಿಯ ಸಂಸರ್ಗದಿಂದ, ತಾನೂ ತನ್ನ ಬಿಸುಪನ್ನು ಕಳೆದುಕೊಂಡು, ಮಳೆಯ ನೀರಾಗಿ ಧರೆಗಿಳಿಯುವುದು; ನೆಲದ ಜೀವರಿಗೆಲ್ಲಾ ಗೆಲವನ್ನು ತರುವುದು; ಬಾಳುವ ಒಲವನ್ನು ಬೀರುವುದು. ಹಾಗೆಯೇ ಹೃದಯದಿಂದ ಈರ್ಷ್ಯೆಯ ದಗೆಯನ್ನು ದೂರಮಾಡಿ. ಅದು ಜೀವಮಾತ್ರರ ಮೇಲೆ ಅಕ್ಕರೆಯ ಮಳೆಗರೆವ ಸ್ಥಿತಿಗೆ ಬರಬೇಕಾದರೆ, ಅದಕ್ಕೂ ಒಂದು ಶಾಂತಿಯುಕ್ತ ಸಂಸರ್ಗ ಬೇಕು; ಆ ಸಂಸರ್ಗ ಯಾವುದು?

**ದ್ಯೌರ್ನಃ ಪಿತಾ ಪೃಥಿವೀ ಮಾತಾ ಸೋಮೋ ಭ್ರಾತಾಽದಿತಿಃ**
**ಸ್ವಸಾ। ಅದೃಷ್ಟಾ ವಿಶ್ವದೃಷ್ಟಾಶ್ಚ ಸ್ತಿಷ್ಠತೇ ಲಯತಾ ಸುಕಂ॥**

[ಋಗ್ವೇದ :– ೧–೧೯೧–೬]

**"ಸೂರ್ಯ ನಿಮ್ಮ ತಂದೆ; ಪೃಥಿವೀ ತಾಯಿ; ಸೋಮ-ಎಂದರೆ ವಿವೇಕವು ನಿಮ್ಮ ಸೋದರ; ಅದಿತಿ-ಎಂದರೆ ಸ್ವಾತಂತ್ರ್ಯವು ನಿಮ್ಮ ಸೋದರಿ. ಕಣ್ಣಿಗೆ ಕಾಣಿಸದಿರುವ ಮತ್ತು ಕಂಡುಬರುವ ಎಲ್ಲರೂ ಆನಂದದಿಂದ ಇರಿ. ಸುಖವಾಗಿ ಜೀವನವನ್ನು ಸವಿಯಿರಿ,"** – ಎಂಬ ಉದಾತ್ತ ಭಾವನೆಯ ಸಂಸರ್ಗವೇ ಈರ್ಷ್ಯಾನಿವಾರಣದ ಉಪಾಯ. ವಿವೇಕ ವಿರಲಿ; ಎಲ್ಲರಿಗೂ ಜೀವಿಸುವ ಹಕ್ಕಿದೆ-ಎಂಬ ಭಾವನೆ ಬೆಳೆಯಲಿ. ಆಮೇಲೆ, ಯಾರಿಗೂ ಯಾರ ಮೇಲೂ ಈರ್ಷ್ಯೆ ಹುಟ್ಟದು. ಆದುದರಿಂದ, ಬನ್ನಿರಿ. **"ಜಹಿ ಶ್ವಯಾತುಂ"** – "ಬಲಿಹಾಕು ನಾಯಿಯ ನಡೆಯನ್ನು; ಹೊಟ್ಟೆಯ ಕಿಚ್ಚನ್ನು." – ಎಂಬ ವೇದಾದೇಶವನ್ನು ನೆನಪಿಡೋಣ. ಆದರ್ಶಮಾನವ ರಾಗಲು-ಪರೋತ್ಕರ್ಷ ಸಹಿಷ್ಣುಗಳಾಗಲು ಸತತ ಪ್ರಯತ್ನಮಾಡೋಣ.

## ೮

# ಜಕ್ಕವಕ್ಕಿಯ ನಡೆಯನ್ನು ಬಲಿಹಾಕು

ಇದುವರೆಗೆ ಉಲೂಕಯಾತು, ಶುಶುಲೂಕಯಾತು, ಶ್ವಯಾತು–ಈ ಮೂರು ರಕ್ಷಸ್ಸುಗಳ, ಸಾಕಾದಷ್ಟು ಪರಿಚಯವಾಯಿತು. ಇನ್ನು ನಾಲ್ಕನೆಯ ದನ್ನು ವಿಚಾರಿಸಿಕೊಳ್ಳೋಣ, ಬನ್ನಿರಿ. ಪುನಃ ಅದೇ ಮಂತ್ರದ ಈ ಭಾಗ ಓದೋಣ :–

**ಉತ ಕೋಕಯಾತುಂ ಜಹಿ.** [ಋಗ್ವೇದ :– ೭–೧೦೪–೨೨]

[ಉತ-ಮತ್ತು, ಕೋಕಯಾತುಂ–ಚಕ್ರವಾಕದ ನಡೆಯನ್ನು, ಜಹಿ–ಬಲಿಹಾಕು.]

ನಮ್ಮ ಪ್ರಿಯಪಾಠಕರು ಈ ಪ್ರಕರಣದಲ್ಲಿ ಕಾಣಬಯಸುವುದು ನಾಲ್ಕನೆಯ ರಕ್ಷಸ್ಸನ್ನು ತಾನೇ? ಮಂತ್ರದಲ್ಲಿ ಅವನನ್ನು 'ಕೋಕಯಾತು'- ಎಂದು ಕರೆದಿದೆ. ಕೋಕ–ಎಂದರೆ ಚಕ್ರವಾಕಪಕ್ಷಿ. ಕನ್ನಡದಲ್ಲಿ ಅದನ್ನೇ ಜಕ್ಕವಕ್ಕಿ–ಎನ್ನುತ್ತಾರೆ ಯಾತು ಎಂದರೆ 'ನಡೆ' ಎಂಬುದನ್ನು ಪಾಠಕರು

ಬಲ್ಲರು. ಹೀಗೆ 'ಕೋಕಯಾತು' ಎಂದರೆ, ಜಕ್ಕವಕ್ಕಿಯು ನಡೆ-ಎಂದರ್ಥ ಜಕ್ಕವಕ್ಕಿಯ ಸ್ವಭಾವವೇನು? ಎಲ್ಲರಿಗೂ ಗೊತ್ತು. ಗಂಡು ಹೆಣ್ಣನ್ನಗಲಿ, ಹೆಣ್ಣು ಗಂಡನ್ನಗಲಿ, ಒಂದು ಕ್ಷಣವಾದರೂ ಇರಲಾರದು. ಗಂಡುಜಕ್ಕವಕ್ಕಿ ಹೆಣ್ಣು ಮರೆಯಾದೊಡನೆ ವಿಕಾರವಾಗಿ ಒರಲುತ್ತದೆ; ಹೆಣ್ಣಂತೂ ಗಂಡು ಜಕ್ಕವಕ್ಕಿ ಕಾಣಿಸದಾದರೆ – ಮೂರ್ಛೆ ಹೋಗಿಬಿಡುತ್ತದಂತೆ! ಸೋತು ನೆಲಕ್ಕೊರುವವರೆಗೆ ದೇಹಸುಖದಲ್ಲಿ ಮಗ್ನವಾಗಿರುವುದೇ ಈ ಪಕ್ಷಿಯ ವಿಶೇಷ ಗುಣ. ಆದುದರಿಂದ, ಕೋಕಯಾತು ಎಂದರೆ ಕಾಮ – ಎಂದು ಅರ್ಥವಾಗುತ್ತದೆ.

ಈ ವರೆಗೆ ಹೇಳಿರುವ ರಕ್ಷಸ್ಸುಗಳೆಲ್ಲಾ ಮಹಾಪ್ರಬಲರೇ ಎಂಬುದರಲ್ಲಿ ಸಂದೇಹವಿಲ್ಲ; ಆದರೆ, ನಾಲ್ಕನೆಯದಾದ ಈ ಕಾಮ ಎಂಬ ರಕ್ಷಸ್ಸಿನ ತೂಕವೇ ಬೇರೆ.

ನಾವು 'ಕೋಕಯಾತು' ಎಂಬ ಶಬ್ದಕ್ಕೆ ಮಾಡಿರುವ 'ಕಾಮ' ಎಂಬರ್ಥವು ಮೈಥುನಾಪೇಕ್ಷೆ ಅಥವಾ ಲೈಂಗಿಕ ಸುಖೇಚ್ಛೆ – ಎಂಬುದೇ ಆಗಿರುತ್ತದೆ. ಯಾವನ ಹೃದಯದಲ್ಲಿ ಬ್ರಹ್ಮಚರ್ಯಘಾತಕವಾದ ಈ ಕಾಮ ಬೀಡುಬಿಡುತ್ತದೋ, ಆ ಹತಭಾಗ್ಯನು ರಾಜನಾದರೂ ಗುಲಾಮನೇ; ಲಕ್ಷಾಧೀಶ್ವರನಾದರೂ ತಿರುಕನೇ; ವಿದ್ವಾಂಸನಾದರೂ ವಜ್ರಮೂರ್ಖನೇ. ಏಕೆಂದರೆ–ಅವನು ಕಾಮೋದ್ರೇಕಕ್ಕೇ ವಶನಾಗಿ, ಅತಿ ದೀನನಾಗಿ ಹೋಗುತ್ತಾನೆ. **"ಕಾಮಾತುರಾಣಾಂ ನ ಭಯಂ ನ ಲಜ್ಜಾ"** ಕಾಮಾತುರರಾದವರಿಗೆ ಭಯವೂ ಇರುವುದಿಲ್ಲ; ನಾಚಿಕೆಯೂ ಇರುವುದಿಲ್ಲ. ಕಾಮಾತುರನು ಶರೀರದಿಂದ ಮಾನವನಂತೆ ಕಂಡುಬರುತ್ತಿದ್ದರೂ, ವಸ್ತುತಃ ಪಶುವೇ ಆಗಿ ಹೋಗುತ್ತಾನೆ. ಬೇರೆ ರಕ್ಷಸ್ಸುಗಳು ಮಾನವನ ಒಂದೊಂದು ಶಕ್ತಿಯನ್ನಪಹರಿಸುವರಾದರೆ, ಈ ಕಾಮ, ಮನಃಶಕ್ತಿ, ಬುದ್ಧಿಶಕ್ತಿ, ವಾಕ್ಶಕ್ತಿ, ದೇಹಶಕ್ತಿ – ಎಲ್ಲವನ್ನೂ ಹಿಂಡಿಹಾಕಿ, ಮಾನವನ ಬಾಳನ್ನು ಅವನ ಪಾಲಿಗೇ ಒಂದು ಹೊರೆಯನ್ನಾಗಿ ಮಾಡಿಬಿಡುತ್ತದೆ. ಮಾನವರಲ್ಲಿ ಕಾಮವಾಸನೆ ಬಲಿತಲ್ಲಿ ಪರಿವಾರ, ಸಮಾಜ, ರಾಷ್ಟ್ರ - ಯಾವುದೂ ತಲೆಯೆತ್ತಲಾರದು.

ಜನಜೀವನ ಉಚ್ಛೃಂಖಲವಾಗಿ, ಎಲ್ಲವೂ ಕೊಳೆತು ನಾರುವ ಹೊಲಸಿನ ರಾಶಿಯಾಗುವುದು. ಸ್ತ್ರೀಯ ಸ್ತ್ರೀತ್ವ, ಪುರುಷನ ಪುರುಷತ್ವ–ಎರಡೂ ಶೂನ್ಯ ವಿಲೀನವಾಗಿ ಹೋಗುವುವು. ಈ ವೇದಮಂತ್ರವನ್ನೋದಿರಿ :–

**ಯಂ ವಿಶ್ವೇ ದೇವಾಃ ಸ್ಮರಮಸಿಂಚನ್ನಪ್ಸ್ವಂತಃ ಶೋಶುಚಾನಂ ಸಹಾಧ್ಯಾ । ತಂ ತೇ ತಪಾಮಿ ವರುಣಸ್ಯ ಧರ್ಮಣಾ ॥**

[ಅಥರ್ವ :– ೬-೧೩೨-೨]

ಈ ಮಂತ್ರ ಕಾಮದ ಬಗ್ಗೆ ಹೀಗೆ ಹೇಳುತ್ತದೆ :– "(ವಿಶ್ವೇದೇವಾಃ) ಸಮಸ್ತ ಇಂದ್ರಿಯಗಳೂ, (ಅಪ್ಸುಅಂತಃ) ಜನರಲ್ಲಿ, (ಆಧ್ಯಾ ಸಹ) ಮಾನಸಿಕ ಚಿಂತೆಯೊಂದಿಗೆ (ಶೋಶುಚಾನಂ) ಉರಿಯುತ್ತಿರುವ (ಯಂ) ಯಾವ (ಸ್ಮರಂ) ಕಾಮವನ್ನು (ಅಸಿಂಚನ್) ಬಲಗೊಳಿಸುತ್ತವೋ, (ತಂ ತೇ) ಆ ನಿನ್ನನ್ನು (ಕಾಮನನ್ನು) (ವರುಣಸ್ಯ) ಪಾಪನಿವಾರಕನಾದ ಭಗವಂತನ, (ಧರ್ಮಣಾ) ಧರ್ಮದಿಂದ (ತಪಾಮಿ) ಕಾಯಿಸುತ್ತೇನೆ." ಈ ಮಂತ್ರದಲ್ಲಿ ಕಾಮವು ಎಲ್ಲ ಜನರಲ್ಲಿಯೂ ಅಡಗಿದೆ - ಎಂಬುದನ್ನು ಮೊದಲು ಸಾರಿ ಹೇಳಿದೆ. ಸರ್ವಥಾ ಕಾಮವೇ ಇಲ್ಲವಾದರೆ–ಸಂತಾನೋತ್ಪಾದನಾಕ್ರಿಯೆಯೇ ನಾಶವಾಗಿ ಹೋದೀತು. ಪ್ರತಿಯೊಬ್ಬ ನರ ಹಾಗೂ ಪ್ರತಿಯೊಬ್ಬಳು ನಾರಿಯಲ್ಲಿಯೂ ಕಾಮವಿದ್ದೇ ಇರುತ್ತದೆ. ಜೊತೆಗೆ 'ಆಧಿ' ಮಾನಸಿಕ ರೋಗ ಎಂದರೆ ಚಿಂತೆಯೂ ಅದರೊಂದಿಗೆ ಇದೆ - ಎಂದು ಹೇಳಿ. ಕಾಮಿಯಾದವನ ಅಥವಾ ಅತಿ ಕಾಮಿಯಾದವನ ಹಣೆಯಬರಹವೇನೆಂಬುದನ್ನು ಸೂಚಿಸುತ್ತಲಿದೆ. ಕಾಮ ಬಲಿತಲ್ಲಿ ಮನೋರೋಗ ಖಂಡಿತ; ಮನೋರೋಗದಿಂದ ದೈಹಿಕವ್ಯಾಧಿಗಳು ಹುಟ್ಟುವುದರಲ್ಲಿಯೂ ಸಂದೇಹವಿಲ್ಲ. ಹೀಗೆ ಕಾಮಾಸಕ್ತನು ಆಧಿ–ವ್ಯಾಧಿಗಳಿಗೀಡಾಗಿ ನಷ್ಟಭ್ರಷ್ಟನಾಗಿ ಹೋಗುತ್ತಾನೆ. ಎಲ್ಲರಲ್ಲಿಯೂ ಸಹಜವಾಗಿಯೇ ಅಡಗಿರುವ ಈ ಕಾಮನು ಉಗ್ರರೂಪವನ್ನೇಕೆ ಧರಿಸುತ್ತಾನೆ? – ಎಂಬ ಪ್ರಶ್ನೆಗೆ ವೇದ, **ಕಾಮಾಗ್ನಿಗೆ ತುಪ್ಪಸುರಿಯುವ ಸಾಧನಗಳು ಶರೀರದಲ್ಲಿರುವ ಇಂದ್ರಿಯಗಳು** – ಎಂದು ಉತ್ತರ ಹೇಳುತ್ತಲಿದೆ. ಇದರ ಅರಿವು ಯಾರಿಗಿಲ್ಲ? ಕಣ್ಣಿನಿಂದ ನೋಡಬಾರದ ನಗ್ನ ಅಥವಾ

ಅರ್ಧನಗ್ನ ನರನಾರಿಯರ ಚಿತ್ರಗಳನ್ನೂ, ದೃಶ್ಯಗಳನ್ನೂ ನೋಡುತ್ತಾ, ಕಿವಿಯಿಂದ ಕೇಳಬಾರದ ಉದ್ವೇಗಜನಕವಾದ ಶಬ್ದಗಳನ್ನೂ, ಮಾತುಗಳನ್ನೂ ಕೇಳುತ್ತಾ, ನಾಲಿಗೆಯಿಂದ ಕಾಮೋತ್ತೇಜಕವಾದ ತಾಮಸ ಮಸಾಲೆ ಪದಾರ್ಥಗಳನ್ನೂ, ಮದ್ಯಮಾಂಸಗಳನ್ನೂ ಸವಿಯುತ್ತಾ, ಮೂಗಿನಿಂದ ಉತ್ತೇಜಕವಾದ ಗಂಧವನ್ನು ಮೂಸುತ್ತಾ, ಚರ್ಮದಿಂದ ಸುಪ್ತಕಾಮವನ್ನು ಹೊಡೆದೆಬ್ಬಿಸುವ ಮರ್ಮಾಂಗಗಳನ್ನು ಸ್ಪರ್ಶಿಸುತ್ತಾ – "ನನಗೆ ಕಾಮೋದ್ರೇಕವಾಗದಿರಲಿ."- ಎಂದಾಶಿಸುವವನಿಗಿಂತ ವಜ್ರಮೂರ್ಖನು ಬೇರಾವನೂ ಇರಲಾರನು. ಇಂದ್ರಿಯಗಳು ದುರ್ವ್ಯಾಪಾರದಲ್ಲಿ ಮಗ್ನವಾಗಿರುವವರೆಗೆ, ಕಾಮ ವಿಜಯ ಸಂಭವವೇ ಅಲ್ಲ. ವಸ್ತುತಃ ಇಂದ್ರಿಯಗಳು, ಮನಸ್ಸಿನೊಂದಿಗೆ ಸೇರಿ, ಜೀವಾತ್ಮನ ಉತ್ಥಾನ ಅಥವಾ ಪತನಕ್ಕೆ ಕಾರಣವಾಗುತ್ತವೆ. ಅಥರ್ವವೇದ ಇದನ್ನೇ ಈ ರೀತಿ ಬಣ್ಣಿಸುತ್ತದೆ :—

**ಇಮಾನಿ ಯಾನಿ ಪಂಚೇಂದ್ರಿಯಾಣಿ ಮನಃಷಷ್ಠಾನಿ ಮೇಹೃದಿ ಬ್ರಹ್ಮಣಾ ಸಂಶಿತಾನಿ । ಯೈರೇವ ಸಸೃಜೇ ಘೋರಂ ತೈರೇವ ಶಾಂತಿರಸ್ತು ನಃ ॥** [ಅಥರ್ವ :– ೧೯–೯–೫]

(ಇಮಾನಿ) ಈ, (ಯಾನಿ) ಯಾವ (ಮನಃಷಷ್ಠಾನಿ) ಆರನೆಯದಾಗಿ ಮನಸ್ಸನ್ನುಳ್ಳ, (ಪಂಚೇಂದ್ರಿಯಾಣಿ) ಐದು ಜ್ಞಾನೇಂದ್ರಿಯಗಳು (ಮೇ) ನನ್ನ (ಹೃದಿ) ಹೃದಯದಲ್ಲಿ (ಬ್ರಹ್ಮಣಾ) ಪರಬ್ರಹ್ಮನಿಂದ (ಸಂಶಿತಾನಿ) ಅಣಿಮಾಡಲ್ಪಟ್ಟಿವೆಯೋ (ಯೈಃಏವ) ಯಾವವುಗಳ ದೆಸೆಯಿಂದಲೇ (ಘೋರಂ) ಭೀಕರ ಪರಿಸ್ಥಿತಿಯು (ಸಸೃಜೇ) ಉಂಟುಮಾಡಲ್ಪಡುತ್ತದೋ (ತೈಃಏವ) ಅವುಗಳಿಂದಲೇ (ನಃ) ನಮಗೆ (ಶಾಂತಿಃ) ಶಾಂತಿಯು (ಅಸ್ತು) ಉಂಟಾಗಲಿ. ಹೃದಯದ ಸ್ಪಂದನಕ್ಕನುಸಾರ ಇಂದ್ರಿಯಗಳ ಶಕ್ತಿ ತೀವ್ರ ಅಥವಾ ಮಂದವಾಗುವುದರಿಂದ ಅವುಗಳು ಹೃದಯದಲ್ಲಿ ಬ್ರಹ್ಮನಿಂದ ಅಣಿ ಮಾಡಲ್ಪಟ್ಟಿವೆ – ಎಂದು ಹೇಳಿದೆ. **ಈ ಜ್ಞಾನೇಂದ್ರಿಯಗಳು ಆತ್ಮನಿಗೆ ಘಾತಕವಾದ ವಿಷಯಗಳ ಆಸ್ವಾದನದಲ್ಲಿ ತೊಡಗಿದರೆ, ಆತ್ಮನಿಗೆ ಘೋರಪತನ ಉಂಟಾಗುವುದು; ಅವು ಸದ್ವಿಷಯಗಳಲ್ಲಿ ತೊಡ**

**ಗಿದ್ದರೆ – ಆತ್ಮವಿಶ್ವಾಸ ಸಹಜವಾಗಿಯೇ ಆಗಿ ಶಾಂತಿಯುಂಟಾಗುವುದು.** ಆದಕಾರಣವೇ, ವೇದಮಂತ್ರ, ಇಂದ್ರಿಯಗಳಿಂದ ವಿಷಯತೈಲ ಪಡೆದು, ಧಗಧಗನೆ ಉರಿಯುತ್ತಾ ಹೃದಯ, ಮನಸ್ಸು, ಬುದ್ಧಿ, ಶರೀರ- ಎಲ್ಲವುಗಳನ್ನೂ ತಳಮಳಗೊಳಿಸಿ, ಬಾಳಿನ ಬಣ್ಣವನ್ನೇ ಬರಿದುಮಾಡುವ ಕಾಮವನ್ನು ಸರಿಯಾದ ರೀತಿಯಲ್ಲಿ ಉರಿಯುವಂತೆ, ಆತ್ಮನಾಶಕವಾಗಿಯಲ್ಲ; ಆತ್ಮಪೋಶಕವಾಗಿ ಬೆಳಗುವಂತೆ ಮಾಡುವ ವಿಧಾನವನ್ನು ಬಣ್ಣಿಸುತ್ತಾ – **"ತಂ ತೇ ತಪಾಮಿ ವರುಣಸ್ಯ ಧರ್ಮಣಾ"** "ಆ ನಿನ್ನನ್ನು ವರುಣನ ಧರ್ಮದಿಂದ ಕಾಯಿಸುತ್ತೇನೆ." - ಎಂಬ ವಾಕ್ಯವನ್ನು ನಮ್ಮೆದುರಿಗೆ ಇಡುತ್ತದೆ. ವರುಣನಾರು? ಪಾಪನಿವಾರಕನಾದ ಪರಮಾತ್ಮನೇ ವರುಣ; ಧರ್ಮ- ಎಂದರೆ ಧಾರಣಶಕ್ತಿ. ವರುಣ ಧರ್ಮದಿಂದ ಎಂದರೆ, ಸರ್ವಪಾಪನಿವಾರಕನಾದ ಭಗವಂತನ ಧಾರಣಶಕ್ತಿಯಿಂದ, ಪರಮಾತ್ಮನ ಗುಣಕರ್ಮ ಸ್ವಭಾವಗಳನ್ನು ಸ್ವತಃ ತನ್ನಲ್ಲಿ ಉಂಟುಮಾಡಿಕೊಳ್ಳುವುದರಿಂದ, ಸರ್ವರ ಜೀವನದಲ್ಲಿಯೂ, ಅಡಗಿರುವ ಕಾಮವನ್ನು ಕಾಯಿಸಬಹುದು; ಪುಟಕ್ಕಿಟ್ಟು, ಹದಗೊಳಿಸಿ, ಜಯಿಸಿ, ಅದನ್ನೂ ಆತ್ಮೋದ್ಧಾರಕ್ಕಾಗಿಯೇ ಬಳಸಬಹುದು. ಎಂಬುದು ಸ್ಪಷ್ಟವಾಗುತ್ತದೆ. ನರನಿಗೆ ನಾರಿಯ. ಮತ್ತು ನಾರಿಗೆ ನರನ ಸುಖದ ಆಸೆ ಸಹಜ; ಆದರೆ ಆ ಆಸೆ ಹಿಡಿತದಲ್ಲಿಲ್ಲದೆ, ಕರ್ತವ್ಯಾಕರ್ತವ್ಯ ವಿವೇಕವಿಲ್ಲದೆ. ಧರ್ಮಾಧರ್ಮ ವಿವೇಚನೆಯಿಲ್ಲದೆ – "ದೇಹದ ಹಂಬಲಿನ ಪೂರೈಕೆಗಾಗಿಯೇ ಸ್ತ್ರೀ–ಪುರುಷ ಭೇದದ ರಚನೆಯಾಗಿದೆ. ಆದಕಾರಣ ಕಾಮಾಸಕ್ತನಾಗಿ ಸುಖಿಸುವುದೇ ದೇಹಿಯ ಧರ್ಮ" – ಎಂಬ ಭಾವನೆಯಿಂದ, ಕಾಮಕ್ಕೆ ದಾಸನಾಗಿ ಹೋದರೆ – ಮಾನವತ್ವ ಮಣ್ಣುಮುಕ್ಕಲು ಮುಹೂರ್ತ ಮಾತ್ರವೇ ಸಾಕು.

ಅತಿಕಾಮಿಗಳ ದುರ್ಗತಿಯ ವರ್ಣನೆ ಮಾಡುವುದು ಎಂತು ಕಠಿಣವೋ, ಅಂತೇ ಬೇಸರ ಹುಟ್ಟಿಸುವಂತಹುದೂ ಅಹುದು. **ಕಾಮರೋಗಕ್ಕಿಂತ ಹಿರಿದಾದ ರೋಗವಿಲ್ಲ.** ಯಯಾತಿರಾಜನ ಕತೆ ಕೇಳದವರಾರು? ಕಾಮಪಿಪಾಸೆಯನ್ನು ಹಿಂಗಿಸಿಕೊಳ್ಳಲು, ಅವನು ಜೀವನಪೂರ್ತಿ ಸ್ತ್ರೀಲೋಲನಾಗಿ ಬಾಳಿದನು. ತನ್ನ ಪಾಶವೀವೃತ್ತಿಯ ತೃಪ್ತಿಗಾಗಿ, ಯುವಕನಾಗಿದ್ದ ತನ್ನ

ಪುತ್ರ ಪುರುವಿನ ಯೌವನ ಸುಖ ಸಾಧನವನ್ನೂ ಅಪಹರಿಸಿದನು. ಕೊನೆಗಾದುದೇನು? ತೃಪ್ತಿ ಸಿಕ್ಕಿತೇ? ಕನಸಿನಲ್ಲಿಯೂ ಇಲ್ಲ. ಕೊನೆಗವನು ತನ್ನ ತಪ್ಪಿಗಾಗಿ ಪರಿತಪಿಸುತ್ತಾ ಹೇಳಿದನು :—

**ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿ ವರ್ಧತೇ ॥**
**ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ । ಯೋಽಸೌ ಪ್ರಾಣಾಂತಿಕೋ ರೋಗ ಸ್ತಾಂ ತೃಷ್ಣಾಂ ಪರಿತ್ಯಜೇತ್॥**[ಮಹಾಭಾರತ, ಆದಿಪರ್ವ: ೮೫೧೨.೧೪]

"ಕಾಮೋಪಭೋಗದಿಂದ ಕಾಮವೆಂದಿಗೂ ಶಾಂತವಾಗುವುದಿಲ್ಲ. ಹವಿಸ್ಸಿನಿಂದ ಬೆಂಕಿ ವರ್ಧಿಸುವಂತೆಯೇ, ಇನ್ನೂ ಹೆಚ್ಚುತ್ತಾಹೋಗುತ್ತದೆ. ತೃಷ್ಣೆಯು – ಕಾಮದ ಬಾಯಾರಿಕೆಯು ದುರ್ಬುದ್ಧಿಯುವರಿಗೆ ತ್ಯಜಿಸಲು ಕಷ್ಟಕರವಾದುದು. ಶರೀರ ಜರಾ ಜೀರ್ಣವಾದರೂ ಅದು ಮಾತ್ರ ಜೀರ್ಣವಾಗುವುದಿಲ್ಲ. **ಅದು ವಸ್ತುತಃ ಪ್ರಾಣಾಂತಿಕವಾದ ರೋಗ.** ಆದುದರಿಂದ, ಕಾಮಪಿಪಾಸೆಯನ್ನು ತ್ಯಜಿಸಿಯೇ ಬಿಡಬೇಕು." ಯಯಾತಿಯ ಪ್ರತಿಯೊಂದು ಮಾತೂ ಸತ್ಯ. ಕಾಮಪೀಡೆಗಿಂತ ದೊಡ್ಡ ಪೀಡೆಯಿಲ್ಲ. ಕಾಮಿಯ ಶರೀರ ಟೊಳ್ಳಾಗುತ್ತದೆ; ಕಾಮಿಯ ಬುದ್ಧಿ ಜಳ್ಳಾಗುತ್ತದೆ. ಕಾಮಿಯ ಮನ ಪೊಳ್ಳಾಗುತ್ತದೆ. ಕಾಮಿಯ ಹೃದಯ ಮುಳ್ಳಾಗುತ್ತದೆ. ಸಂಪತ್ತು, ಆರೋಗ್ಯ, ಬಲ, ಯಶಸ್ಸು ಎಲ್ಲವನ್ನೂ ಕಳೆದುಕೊಂಡು, ಕಾಮಿ ನರಕದ ಹುಳುವಾಗಿ ಮುಲಮುಲನೆ ಒದ್ದಾಡುತ್ತಾ, ಎದೆತುಂಬ ಇನ್ನೂ ತೀರದ ದಾಹದ ದಗೆಯನ್ನೇ ತುಂಬಿಕೊಂಡು ಒಂದು ದಿನ ಸದಾ ಕಾಲಕ್ಕೂ ಕಣ್ಮುಚ್ಚಿ ಮಲಗಿಬಿಡುತ್ತಾನೆ. ಕಾಮಿ, ತಾನೇ ತನ್ನ ದೇಹವನ್ನು ಕೆಡಿಸಿಕೊಳ್ಳುತ್ತಾನೆ. ಏಕೆಂದರೆ, ಸಫಲಜೀವನದ, ಜೀವನ ಸ್ಫೂರ್ತಿಯ, ಆಶಾಜ್ಯೋತಿಯ ಏಕಮಾತ್ರ ಮೂಲ ಆಧಾರವಾದ ಅಮೂಲ್ಯ ವೀರ್ಯವನ್ನು, ನೀರಿನಂತೆ ಚೆಲ್ಲಿ ಸರ್ವನಾಶಮಾಡಿಕೊಳ್ಳುತ್ತಾನೆ. ಕಾಮಿ ತನಗಂತೂ ಶತ್ರುವೇ ಆಗಿರುತ್ತಾನೆ; ಸಮಾಜಕ್ಕೂ ಒಂದು ಪೀಡೆಯೇ ಆಗಿ ಪರಿಣಮಿಸುತ್ತಾನೆ. ಸದಾಚಾರ,

ಸದ್ವಿಚಾರ-ಎಲ್ಲದರ ಅಡಿಗಲ್ಲೂ ಬ್ರಹ್ಮಚರ್ಯ. ಲಂಗೋಟಿ ಭದ್ರವಿಲ್ಲದ ಮನುಷ್ಯ, ಯಾವ ಮನೆ, ಸಂಸ್ಥೆ ಅಥವಾ ಸಮಾಜದಲ್ಲಿ ಕಾಲಿಟ್ಟರೂ ಅಲ್ಲಿನ ವಾತಾವರಣದಲ್ಲಿ ಪಾತಕದ ದುರ್ಗಂಧವನ್ನು ಹರಡಿಸಿಯೇ ತೀರುತ್ತಾನೆ. ಕಾಮಿಯ ವೈಶಿಷ್ಟ್ಯವೆಂದರೆ, ಒಳ್ಳೆಯವರನ್ನೂ ತನ್ನ ಶತ್ರುಗಳಾಗಿ ಮಾಡಿಕೊಳ್ಳುವುದೇ ಆಗಿರುತ್ತದೆ. ಶ್ರೀರಾಮನಂತಹ ಮರ್ಯಾದಾಪುರುಷೋತ್ತಮನನ್ನು ಎದುರು ಹಾಕಿಕೊಂಡು, ರಾವಣ ಗಳಿಸಿದ ಭಾಗ್ಯವೇನು? ಸರ್ವನಾಶವೇ ತಾನೇ? ರಾಣಿ ಮಂಡೋದರಿ, ಎಷ್ಟು ಸ್ಪಷ್ಟವಾಗಿ ರಾವಣನ ಸರ್ವನಾಶದ ಕಾರಣವನ್ನು ಹೇಳಿದ್ದಾಳೆ :–

**ಇಂದ್ರಿಯಾಣಿ ಪುರಾ ಜಿತ್ವಾ ಜಿತಂ ತ್ರಿಭುವನಂ ತ್ವಯಾ ।**
**ಸ್ಮರದ್ಭಿರಿವತದ್ವೈರಮಿಂದ್ರಿಯೈರೇವ ನಿರ್ಜಿತಃ ॥**

[ವಾಲ್ಮೀಕಿ ರಾಮಾಯಣ, ಯುದ್ಧಕಾಂಡ :— ೧೧೪-೧೮]

"ಪತಿದೇವ! ನೀನು ಮೊದಲು ಇಂದ್ರಿಯಗಳನ್ನು ಗೆದ್ದು ಮೂರು ಲೋಕಗಳನ್ನು ಗೆದ್ದೆ. ಇಂದ್ರಿಯಗಳೇ ಇಂದು ಆ ವೈರವನ್ನು ಸ್ಮರಿಸಿಕೊಂಡೋ ಎಂಬಂತೆ ನಿನ್ನನ್ನು ಗೆದ್ದವು" ನಿಜ. ರಾವಣನು ಜಿತೇಂದ್ರಿಯನಾಗಿದ್ದವರೆಗೆ ಯಾರೂ ಅವನನ್ನು ಜಯಿಸಲಾಗಲಿಲ್ಲ. ಯಾವಾಗ ಅವನು ಸೀತೆಯ ಸಲುವಾಗಿ ಸಂಯಮವನ್ನು ಸಡಿಲಿಸಿದನೋ, ಆಗ ಸರ್ವನಾಶವೇ ಅವನ ಪಾಲಿಗೆ ಬಂದಿತು. ಇತಿಹಾಸದ ಹಾಳೆಗಳನ್ನು ಮಗುಚಿದರೆ, ಕಾಮಚೇಷ್ಟೆಯ ಕಹಿಫಲಗಳಾದ ಇಂತಹ ದುರ್ಘಟನೆಗಳೆಷ್ಟೋ ಸಿಕ್ಕುವುವು. ವಸ್ತುತಃ ಇಂದ್ರಿಯಜಯವೇ ಜಗದ್ವಿಜಯ; ಇಂದ್ರಿಯಗಳ ದಾಸನು ಸಾಮ್ರಾಜ್ಯಾಧಿಪತಿಯೇ ಆದರೂ ನಾಯಿಗಿಂತ ಕಡೆ.

ಇಷ್ಟು ಪ್ರಬಲನಾದ ಕಾಮನನ್ನು ಗೆಲ್ಲುವ ಬಗೆ ಹೇಗೆ? ಬ್ರಹ್ಮಚರ್ಯದ ಅನುಷ್ಠಾನದಿಂದಲೇ ಅದು ಸಾಧ್ಯ. ಬ್ರಹ್ಮ – ಎಂದರೆ ದೊಡ್ಡದು. ಎಲ್ಲಕ್ಕಿಂತ ದೊಡ್ಡದು – ದೇವರು. ಎಲ್ಲಕ್ಕೂ ಹಿರಿಮೆ ನೀಡುವ ಮಹಾವಸ್ತು ಜ್ಞಾನ. ಆದುದರಿಂದ – ದೇವರು ಮತ್ತು ಜ್ಞಾನ - ಎರಡನ್ನೂ ಬ್ರಹ್ಮ

ಎನ್ನುತ್ತಾರೆ. ಆ ದೇವರಲ್ಲಿ ಮತ್ತು ಜ್ಞಾನದಲ್ಲಿ 'ಚರ್ಯ' ಎಂದರೆ ಸಂಚಾರ ಮಾಡುವುದೇ 'ಬ್ರಹ್ಮಚರ್ಯ' ದೇವರು ಅನಂತ; ಜ್ಞಾನವೂ ಅನಂತ. ಅವುಗಳ ಪ್ರಾಪ್ತಿಗೆ ಸೀಮಿತ ಸಾಮರ್ಥ್ಯಶಾಲಿಯಾದ ಜೀವನ ಸಮಸ್ತ ಶಕ್ತಿಯೂ ಮೀಸಲಾದರೆ ಮಾತ್ರ, ಅವುಗಳ ಸಾಧನೆ ಸಾಧ್ಯವಾದೀತಲ್ಲದೆ, ಕ್ಷುಲ್ಲಕ ವಿಷಯ ಭೋಗಗಳಲ್ಲಿ ಇಂದ್ರಿಯಗಳ ಹಾಗೂ ಮನಸ್ಸಿನ ಶಕ್ತಿಯನ್ನು ಹರಿಬಿಡುತ್ತಿದ್ದರೆ-ಬ್ರಹ್ಮಚರ್ಯ ಎಂದಿಗೂ ಸಿದ್ಧಿಸದು; ದೇವರು ಹಾಗೂ ಜ್ಞಾನದ ಪ್ರಾಪ್ತಿಯೂ ಆಗಲಾರದು. ಈಗ ಪಾಠಕರಿಗೆ ಸುಲಭವಾಗಿ ಅರ್ಥವಾಗುವುದು. **ಜನನೇಂದ್ರಿಯವು ಐದು ಜ್ಞಾನೇಂದ್ರಿಯ ಮತ್ತು ಐದು ಕರ್ಮೇಂದ್ರಿಯಗಳ ನಡುವೆ ಒಂದು ಮಾತ್ರ. ಅದೇ ಸರ್ವೇಂದ್ರಿಯವಲ್ಲ.** ಕಾಮ ಪಿಪಾಸೆಯ ತೃಪ್ತಿಗಾಗಿ ಹೆಣಗುವ ಹತಭಾಗ್ಯ. ತ್ವಗಿಂದ್ರಿಯದ, ಅಂದರೆ ಸ್ಪರ್ಶೇಂದ್ರಿಯದ ಚೇಷ್ಟೆಗೆ ಮೊದಲು, ಅವನ ಕಣ್ಣು, ಕಿವಿ, ನಾಲಗೆ-ಮೊದಲಾದ ಇತರ ಇಂದ್ರಿಯಗಳೂ ಅವನನ್ನು ಅತ್ತ ಎಳೆದಿರುತ್ತವೆ. ಹೀಗೆ – ಸಮಸ್ತ ಜ್ಞಾನೇಂದ್ರಿಯಗಳ, ಅಥವಾ ಅವುಗಳಲ್ಲಿ ಹಲವದರ ಸಹಕಾರವಾದರೂ ಇಲ್ಲದೆ, ಕಾಮೋದ್ರೇಕವಾಗಲಾರದು. ಸರ್ವೇಂದ್ರಿಯಗಳ ಶಕ್ತಿಯೂ ಮಹತ್ತಾದುದರ ಪ್ರಾಪ್ತಿಗೆ ಮೀಸಲಾದ ಮೇಲೆ, ಕಾಮೋದ್ರೇಕವಾಗುವ ಸಂಭವವೇ ಇಲ್ಲ. ಮಹಾಪುರುಷರ ಮನಸ್ಸು, ಮಾತು ಮತ್ತು ಮೈ ಮಹತ್ತಾದ ಕಾರ್ಯಗಳಲ್ಲೇ ಮಗ್ನವಾಗಿರುವುದರಿಂದ, ಅವರು ಮೇಲುಮೇಲಕ್ಕೆ ಏರುತ್ತಾ ಹೋಗುತ್ತಾರೆ. ಬ್ರಹ್ಮಚರ್ಯದಲ್ಲಿ – ಮಹತ್ತಾದುದರ ವಿಹಾರದಲ್ಲಿ – ನಿರತರಾದ ಅವರಿಗೆ ಜನನೇಂದ್ರಿಯನಿಗ್ರಹವೂ ಒಂದು ಸಮಸ್ಯೆ–ಎಂದು ತೋರುವುದೇ ಇಲ್ಲ. ಸಹಜವಾಗಿಯೇ ಅವರು ಆ ಕಾರ್ಯ ಮಾಡುತ್ತಾ ಹೋಗುತ್ತಾರೆ.

ಮಹರ್ಷಿ ದಯಾನಂದರು ಕಲ್ಕತ್ತೆಯಲ್ಲಿದ್ದಾಗ ಓರ್ವ ಭಕ್ತನೊಂದು ದಿನ-ಭಗವನ್! ತಾವು ಆದಿತ್ಯಬ್ರಹ್ಮಚಾರಿಗಳೆಂದು ಪ್ರಸಿದ್ಧರಾಗಿದ್ದೀರಿ. ತಮ್ಮ ಜೀವನದಲ್ಲಿ ಎಂದೂ ಒಂದು ಸಾರಿಯಾದರೂ ಕಾಮದೇವನ ಪ್ರಹಾರ ಆಗಿಯೇ ಇಲ್ಲವೇ?" ಎಂದು ಕೇಳಿದನು. ಮಹರ್ಷಿ ವರ್ಯರು ಸ್ವಲ್ಪ ಹೊತ್ತು ಧ್ಯಾನಸ್ಥರಾಗಿದ್ದು, ಆಮೇಲೆ ವತ್ಸ! "ಕಾಮದೇವನ ಪ್ರಹಾರ

ಎಂದೂ ನನ್ನ ಮೇಲಾದಂತೆ ನನಗೆ ನೆನಪಿಲ್ಲ. ಕಾಮ ಸ್ವತಃ ಸೋಮಾರಿ. ಅವನು ಸೋಮಾರಿಗಳ ಮನೆಗೇ ಭೇಟಿಯೀಯುವುದು. ನನಗೆ ಆ ಸೋಮಾರಿಯಾದ ಸ್ಮರನನ್ನು ಸ್ಮರಿಸಿ, ಸಂಧಿಸಿ, ಸ್ವಾಗತಿಸಲು ಸಮಯ ವಾದರೂ ಎಲ್ಲಿದೆ? ಸದಾ ಸವಿತೃದೇವನ ಸಂಸ್ಮರಣ, ವೇದತತ್ತ್ವವಿಚಾರ ವೈದಿಕಧರ್ಮಪ್ರಚಾರ, ವೇದಭಾಷ್ಯವಿಸ್ತಾರ ಹಾಗೂ ಜನೋಪಕಾರದ ಕಾರ್ಯಕ್ಕೆ ನನ್ನ ಚಿತ್ತವನ್ನು ತೆತ್ತಿರುತ್ತೇನೆ. ವತ್ಸ! ಮನ್ಮಥ ಮೈಗಳ್ಳನ ಮೈ-ಮಾತು-ಮನಗಳಲ್ಲಿ ಮಾತ್ರ ಮೂಡುತ್ತಾನೆ; ಕಾರ್ಯನಿರತನ ಹತ್ತಿರ ಸುಳಿಯುವ ಕೆಚ್ಚೇ ಕಾಮನಿಗಿಲ್ಲ" - ಎಂದು ನುಡಿದರು. ವಸ್ತುತಃ ಇದೇ ಸತ್ಯ. ಯಾರು ತಮ್ಮ ಸಮಸ್ತಶಕ್ತಿಯನ್ನೂ ಯಾವುದಾದರೊಂದು ಮಹದಾ ದರ್ಶ ಸಾಧನೆಗಾಗಿ ಮೀಸಲಾಗಿಡುತ್ತಾರೋ. ಅಂದರೆ, ಬ್ರಹ್ಮಚಾರಿಗಳಾಗಿರು ತ್ತಾರೋ, ಅವರ ಜನನೇಂದ್ರಿಯನಿಗ್ರಹ ಎಂದಿಗೂ ಒಂದು ಸಮಸ್ಯಾರೂಪ ತಾಳುವುದೇ ಇಲ್ಲ; ಅದು ಸಹಜವಾಗಿಯೇ ಆಗಿ ಹೋಗುತ್ತದೆ. ಮಾಡಲು ಬದುಕಿಲ್ಲದ, ಕೈತುಂಬ ಕೆಲಸವಿಲ್ಲದ ಸೋಮಾರಿಗೇ ಕಾಮವಿಜಯ ಒಂದು ಭೀಕರ ಸಮಸ್ಯೆಯಾಗಿ ತೋರುವುದು. ಆದುದರಿಂದ ಕಾಮನನ್ನು ಜಯಿಸ ಬಯಸುವವನು, ತಮ್ಮ ಸರ್ವಶಕ್ತಿಯನ್ನೂ ಯಾವುದಾದರೊಂದು ಮಹ ತ್ಕಾರ್ಯ ಸಾಧನೆಯಲ್ಲೇ ವ್ಯಯಿಸಲು ಕಲಿಯಬೇಕು.

ಇಲ್ಲ ಕಾಮ ಗೆಲ್ಲುತ್ತದೆ; ಇಲ್ಲವೇ ಕಾರ್ಯ ಕೈಗೂಡುತ್ತದೆ. ಕಾಮ ಮತ್ತು ಕಾರ್ಯಶೀಲತೆ-ಎರಡೂ ಒಟ್ಟಿಗಿರುವಂತಿಲ್ಲ. ಋಗ್ವೇದದಲ್ಲಿ ಒಂದು ಕಡೆ - **"ಮಾ ಶಿಶ್ನದೇವಾ ಅಪಿಗು ಋರ್ತಂ ನಃ"** [೭-೨೧-೫] "ಶಿಶ್ನ ದೇವರು, ಎಂದರೆ ಗುಹ್ಯೇಂದ್ರಿಯದಿಂದ ಕ್ರೀಡಿಸುವ, ಉಚ್ಛೃಂಖಲರಾದ ಕಾಮಿಗಳು ನಮ್ಮ ಯಜ್ಞವನ್ನು, ಸತ್ಕರ್ಮವನ್ನು, ಸಂಯಮವನ್ನು ನಾಶ ಮಾಡದಿರಲಿ." - ಎಂಬ ವಾಕ್ಯ ಕಂಡುಬರುತ್ತದೆ. ಕಾಮಿಗಳ ಮನಸ್ಸು ಧರ್ಮಕರ್ಮದಲ್ಲಿ ನಿಲ್ಲುವುದಿಲ್ಲ; ಅವರು ಪವಿತ್ರ ಸ್ಥಳಗಳಿಗೆ, ಕಾರ್ಯಕ್ಷೇತ್ರ ಗಳಿಗೆ ಹೋಗುವುದಾದರೂ ತಮ್ಮ ಕಾಮಚೇಷ್ಟೆ ತೃಪ್ತಿಗಾಗಿಯೆ. ನಾವು ಈ ವೇದವಾಕ್ಯದ ಸತ್ಯತ್ವವನ್ನು ಸಾರ್ವಜನಿಕ ಜೀವನದಲ್ಲಿ ಎಷ್ಟು ಸ್ಪಷ್ಟ ವಾಗಿಂದು ಕಾಣುತ್ತಿದ್ದೇವೆ? ಹಾಗೆಂದ ಮಾತ್ರಕ್ಕೆ, ದುರ್ಭಾಗ್ಯದಿಂದ

ಕಾಮಕ್ಕೆ ವಶೀಭೂತರಾಗಿರುವವರಿಗೆ ಮೇಲೇಳುವ ಮಾರ್ಗವೇ ಇಲ್ಲವೆಂದಲ್ಲ ಕಾಮಿಗಳ ಉದ್ಧಾರವೂ ಕಾಮ್ಯವೇ. ಅವರೂ ಮೇಲೇಳಲೇಬೇಕು. ಅದು ಅವರ ಸ್ವಂತ ಪ್ರಯತ್ನದಿಂದಲೇ ಆಗಬೇಕು. ಅದಕ್ಕೂ ದಾರಿಯಿದೆ. ಕೇವಲ ಜನನೇಂದ್ರಿಯದ ನಿಗ್ರಹದ ಪ್ರಯತ್ನ ನಿಷ್ಫಲ; ಬೇರೆ ಜ್ಞಾನೇಂದ್ರಿಯಗಳು ಮತ್ತು ಮನಸ್ಸನ್ನು ಸದ್ವಿಷಯಗಳಲ್ಲಿ ನಿಲ್ಲಿಸುವುದೇ ಏಕಮಾತ್ರ ಪ್ರಶಸ್ತವಾದ ಮಾರ್ಗ–ಎಂದು ಹಿಂದೆ ಹೇಳಿಯೇ ಇದ್ದೇವೆ. ಕೇಳಿರಿ :—

**ಯಜ್ಞಸ್ಯ ಚಕ್ಷುಃ ಪ್ರಭೃತಿರ್ಮುಖಂ ಚ ವಾಚಾ ಶ್ರೋತ್ರೇಣ ಮನಸಾ ಜುಹೋಮಿ। ಇಮಂ ಯಜ್ಞಂ ವಿತತಂ ವಿಶ್ವಕರ್ಮಣಾ ದೇವಾ ಯಂತು ಸುಮನಸ್ಯಮಾನಾ ॥** [ಅಥರ್ವ :- ೨.೩೫.೫]

[ಚಕ್ಷುಃ) ಕಣ್ಣು (ಚ) ಮತ್ತು (ಮುಖಂ) ನಾಲಗೆಯು (ಯಜ್ಞಸ್ಯ) ಯಜ್ಞದ (ಪ್ರಭೃತಿಃ) ಧಾರಣಕರ್ತೃವು (ವಾಚಾ) ವಾಣಿಯಿಂದಲೂ (ಶ್ರೋತ್ರೇಣ) ಕಿವಿಯಿಂದಲೂ (ಮನಸಾ) ಮನಸ್ಸಿನಿಂದಲೂ (ಜುಹೋಮಿ) ಯಜ್ಞವನ್ನೇ ಮಾಡುತ್ತೇನೆ. (ವಿಶ್ವಕರ್ಮಣಾ) ವಿಶ್ವಕರ್ತನಿಂದ (ವಿತತಂ) ವಿಸ್ತರಿಸಲ್ಪಟ್ಟ (ಇಮಂ) ಈ (ಯಜ್ಞಂ) ಯಜ್ಞವನ್ನು (ದೇವಾಃ) ವಿದ್ವಾಂಸರು ಪ್ರಮಾದರಹಿತರು, ವಿಜಯೇಚ್ಛುಗಳು, ಸತ್ಯವಂತರು, (ಸುಮನಸ್ಯಮಾನಾಃ) ಪ್ರಸನ್ನಚಿತ್ತರಾಗಿ (ಯಂತು) ವಶಮಾಡಿಕೊಳ್ಳಲಿ.

ದೇಹ ಸಿಕ್ಕಿರುವುದು ಭೋಗವಿಲಾಸಕ್ಕಲ್ಲ; ಆತ್ಮ ವಿಕಾಸಕ್ಕೆ – ಎಂಬು ದನ್ನು ನೆನಪಿಟ್ಟುಕೊಂಡು, ಈ ಶರೀರವನ್ನು ಅದರ ಪ್ರತಿಯೊಂದು ಅಂಗ ವನ್ನೂ ಕೂಡ-ಯಜ್ಞಕ್ಕಾಗಿಯೇ ಸತ್ಪ್ರವೃತ್ತಿಗಾಗಿಯೇ – ಮೀಸಲಿಡು ವುದರಿಂದ ಪರಮಾತ್ಮನಿಂದಲೇ ರಚಿತವಾದ ಈ ದೇಹಯಜ್ಞವನ್ನು ವಶ ದಲ್ಲಿಟ್ಟುಕೊಳ್ಳುವುದರಿಂದ, ಕಾಮದಹನ ಸಹಜವಾಗಿಯೇ ಆಗುವುದು.

ಈ ವಿಷಯವನ್ನು ಕೊನೆಮುಟ್ಟಿಸುವ ಮುನ್ನ ಇನ್ನೊಂದು ಮಾತನ್ನು ಗೃಹಸ್ಥರ ಸಲುವಾಗಿ ಹೇಳುವುದು ಆವಶ್ಯಕ. ಆದರ್ಶಮಾನವರಾಗುವು ದೆಂದರೆ – ಸಂಸ್ಕಾರ ತ್ಯಾಗ ಮಾಡಿ, ಸಂನ್ಯಾಸಿಗಳಾಗಿ ಹೋಗುವುದೆಂದಲ್ಲ.

ಗೃಹಸ್ಥರೂ ಸಹ ಆದರ್ಶ ಮಾನವರಾಗಬೇಕಾದರೆ, ಅವರೂ ಕಾಮವಿಜಯ ಮಾಡಲೇಬೇಕಾಗಿದೆ. ನಾವು, ಇದೇ ಅಧ್ಯಾಯದ ಪ್ರಾರಂಭದಲ್ಲಿ ಕೊಟ್ಟಿರುವ ವೇದಮಂತ್ರದ **"ತಂತೇ ತಪಾಮಿ ವರುಣಸ್ಯ ಧರ್ಮಣಾ"** - ಎಂಬ ವಾಕ್ಯವನ್ನು ವಿಸ್ತರಿಸುತ್ತಾ - "ಕಾಮನನ್ನು ಪುಟಕ್ಕಿಟ್ಟು, ಅದನ್ನೂ ಆತ್ಮೋದ್ಧಾರಕ್ಕಾಗಿಯೇ ಬಳಸಬಹುದು" – ಎಂದಿದ್ದೇವೆ ವರುಣನ ಧರ್ಮದಿಂದ ಅದು ಸಾಧ್ಯ! ಪರಮಾತ್ಮನ ಸೃಷ್ಟಿಯತ್ತ ನೋಡಿರಿ. ಒಂದು ಅಣುವಿನಿಂದಾಗುವ ಕೆಲಸಕ್ಕೆ ಅವನು ಎರಡು ಅಣುವನ್ನು ಎಂದಿಗೂ ಉಪಯೋಗಿಸುವುದಿಲ್ಲ. ಎಂದರೆ - **ಅಪವ್ಯಯ. ಯಾವುದೇ ವಸ್ತುವಿನ ಅಪವ್ಯಯ ಒಂದು ಅಧರ್ಮ; ಅಪವ್ಯಯ ಅಥವಾ ದುರ್ವ್ಯಯ ಮಾಡದಿರುವುದೇ ವರುಣನ ಧರ್ಮ. ಸಮಸ್ತ ಜೀವನಾಧಾರವಾದ, ಅಮೂಲ್ಯ ವೀರ್ಯರತ್ನವನ್ನು ಕಾಮಪಿಪಾಸಾ ಶಾಂತಿಗಾಗಿ, ಕ್ಷಣಿಕ ಸುಖಕ್ಕಾಗಿ ದುರ್ವ್ಯಯ ಮಾಡುತ್ತಾ ಹೋಗುವುದು ಸ್ಪಷ್ಟವಾಗಿಯೇ ವರುಣನ ಧರ್ಮಕ್ಕೆ ವಿರುದ್ಧವಾದ ಕ್ರಿಯೆ; ಆದುದರಿಂದ ನಿಃಸಂದೇಹವಾಗಿ ಪಾಪ.** ಆದಕಾರಣ ಗೃಹಸ್ಥರು – "ಸ್ತ್ರೀ ಪುರುಷರ ಸಂಭೋಗ ಕೇವಲ ಸಂತಾನೋತ್ಪಾದನೆಗಾಗಿ; ಭೋಗವಿಲಾಸಕ್ಕಾಗಿಯಲ್ಲ" — ಎಂಬ ಮೂಲಭೂತವಾದ ಸಿದ್ಧಾಂತವನ್ನು ಸದಾ ನೆನಪಿಟ್ಟುಕೊಂಡು. ಸಂತಾನಾಪೇಕ್ಷೆಯಿರುವಾಗಲೇ ಲೈಂಗಿಕ – ಸಂಬಂಧವಮಾಡಬೇಕು. ಅದಕ್ಕೂ ಮೊದಲು. ಸಂತಾನಾಪೇಕ್ಷೆ ಮಾಡುವ ಅಧಿಕಾರ, ಯೋಗ್ಯತೆ ತಮಗಿದೆಯೋ-ಇಲ್ಲವೋ-ಎಂಬುದನ್ನು ಪರೀಕ್ಷಿಸಿಕೊಳ್ಳಬೇಕು. **ಕೇವಲ ಮಕ್ಕಳನ್ನು ಈ ಪ್ರಪಂಚಕ್ಕೆ ತರುವುದಲ್ಲ; ಅವರ ವ್ಯಕ್ತಿತ್ವದ ಪೂರ್ಣ ವಿಕಾಸಕ್ಕೆ ಸದವಕಾಶಗಳನ್ನೇರ್ಪಡಿಸುವುದೂ ಸಹ ಗೃಹಸ್ಥರ ಅನಿವಾರ್ಯವಾದ ಕರ್ತವ್ಯವಾಗಿರುತ್ತದೆ-** ಒಂದು ಮಗುವಿನ ಪೂರ್ಣ ವಿಕಾಸಕ್ಕೆ ಸಾಮರ್ಥ್ಯವುಳ್ಳವನು, ಎರಡು ಮಕ್ಕಳಿಗಾಶಿಸುವುದೂ ಸಹ ದುರಾಶೆ; ಆದುದರಿಂದ ಅದು ಪಾಪ. **"ಬಹುಪ್ರಜಾನಿರ್ಋತಿಮಾ ವಿವೇಶ"** - ಬಹು ಮಕ್ಕಳೊಂದಿಗನು ಘೋರ ಸಂಕಟಕ್ಕೆ ಸಿಕ್ಕುತ್ತಾನೆ"–ಎಂದು [ಋ. ೧.೧೬೪.೩೨] ಘೋಷಿಸುತ್ತಲೇ ಇದೆ. ಆದಕಾರಣ ಗೃಹಸ್ಥರೂ ಸಹ, ಶಾರೀರಿಕ ಸುಖ

ವನ್ನು ಕನಿಷ್ಠ ಮಿತಿಯಲ್ಲೇ ಇಟ್ಟುಕೊಂಡು, ಅಮೂಲ್ಯವಾದ ವೀರ್ಯವು ಶಾರೀರಿಕ ತೇಜ, ಮಸ್ತಿಷ್ಕಬಲ ಹಾಗೂ ಜೀವನಸ್ಫೂರ್ತಿಯನ್ನು ನೀಡುವಂತೆ ಶರೀರದಲ್ಲೇ ಏಕರಸವಾಗಲು ಅವಕಾಶವಿತ್ತು ವರುಣನ ಧರ್ಮವನ್ನು ಪಾಲಿಸುತ್ತಾ ಆತ್ಮೋದ್ಧಾರ ಮಾಡಿಕೊಳ್ಳಬೇಕು.

ಪ್ರತಿಯೊಬ್ಬ ನರನಾರಿಗೂ ದೈನಂದಿನ ಜೀವನಕ್ಕೆ ತಿಳಿದಿರಬೇಕಾದ ವಿಷಯವಾದ ಕಾರಣ, ಈ ಪ್ರಕರಣ ಸ್ವಲ್ಪ ದೀರ್ಘವಾಯಿತು. ಅದಕ್ಕಾಗಿ ಪಾಠಕರ ಕ್ಷಮೆ ಬೇಡುತ್ತೇವೆ ನೆನಪಿರಲಿ. ನಾವೆಲ್ಲಾ ಕಾಮದಮನಮಾಡಿ ಮಾನವರು ಮಾತ್ರರಲ್ಲ; ಆದರ್ಶಮಾನವರಾಗಬೇಕಾಗಿದೆ. ಒಬ್ಬ ಆದರ್ಶ ಮಾನವನ ಬಾಯಿಂದ ಹೊರಡಬೇಕಾದ ಮಾತುಗಳೆಂತಿವೆ. ನೋಡಿರಿ :—

**ಯಥಾ ಮಮ ಸ್ಮರಾದಸೌ ನಾಮುಷ್ಯಾಹಂ ಕದಾಚನ ।**
**ದೇವಾಃ ಪ್ರಹಿಣುತ ಸ್ಮರಮಸೌ ಮಾಮನು ಶೋಚತು ॥**

[ಅಥರ್ವ :– ೬–೧೩೦–೩]

[ದೇವಾಃ– (ವಿದ್ವಜ್ಜನರೇ! (ಅಸೌ) ಈ ಕಾಮನು (ಮಮ) ನನ್ನನ್ನು (ಯಥಾಸ್ಮರಾತ್) ನೆನೆದುಕೊಳ್ಳುವಂತೆ (ಕದಾಚನ) ಎಂದಿಗೂ (ಅಹಂ) ನಾನು (ಅಮುಷ್ಯ) ಇವನನ್ನು (ನ) ಸ್ಮರಿಸದಿರುವಂತೆ (ಸ್ಮರಂ) ಕಾಮನನ್ನು (ಪ್ರಹಿಣುತ) ದೂರಕ್ಕಟ್ಟಿರಿ. (ಅಸೌ) ಈ ಕಾಮನು (ಮಾಂ ಅನು) ನನಗಾಗಿ (ಶೋಚತು) ಗೋಳಾಡಲಿ!] ನಿಜ; ನಾವು ಕಾಮಾರ್ತರಾಗಿ ಗೋಳಾಡ ಬಾರದು; ಕಾಮನು ನಮಗಾಗಿ ಗೋಳಾಡಬೇಕು. ವೇದವೇತ್ತನಾದ ಶ್ರೀಕೃಷ್ಣನು ಇದೇ ತತ್ತ್ವವನ್ನು **ತದ್ವತ್ಕಾಮಾಯಂ ಪ್ರವಿಶಂತಿ ಸರ್ವೇ ಸ ಶಾಂತಿಮಾಪ್ನೋತಿ ನ ಕಾಮ ಕಾಮೀ"** [ಗೀತಾ : ೨–೭೦] 'ಎಲ್ಲ ಕಾಮಗಳೂ ಯಾವನನ್ನಾಶ್ರಯಿಸುತ್ತವೋ, ಅವನೇ ಶಾಂತಿ ಹೊಂದುತ್ತಾ ನಲ್ಲದೆ, ಕಾಮವನ್ನು ಬಯಸುವವನಲ್ಲ' – ಎಂಬ ಮಾತಿನಲ್ಲಿ ವರ್ಣಿಸಿದ್ದಾನೆ. ಬನ್ನಿರಿ. ಈ ಧೀರ ಗಂಭೀರ ಭಾವನೆಯನ್ನು ರೂಢಿಸಿಕೊಂಡು ಕಾಮವಿಜಯಿ ಗಳಾಗೋಣ.

**ವೇದದ ಕರೆ ಮರೆಯದಿರಲಿ:- "ಕೋಕಯಾತುಂ ಜಹಿ" ಜಕ್ಕವಕ್ಕಿಯ ನಡೆಯನ್ನು ಬಲಿಹಾಕು**

೬

# ಗರುಡನ ನಡೆಯನ್ನು ಬಲಿಹಾಕು

ಈ ವರೆಗೆ ನಾಲ್ಕು ರಕ್ಷಸ್ಸುಗಳ ಸ್ವರೂಪವನ್ನೂ, ಅವುಗಳ ದುಷ್ಟ ಶಕ್ತಿಯ ಇತಿಮಿತಿಗಳನ್ನೂ ಅರಿತೆವು. ಈಗ ಐದನೆಯದರ ಪರಿಚಯ ಮಾಡಿ ಕೊಳ್ಳೋಣ, ಬನ್ನಿ. ಪುನಃ ಅದೇ ಮಂತ್ರವಾಕ್ಯ ಸ್ಮರಿಸಿಕೊಳ್ಳಿರಿ :—

**ಸುಪರ್ಣಯಾತುಂಜಹಿ** । [ಋಗ್ವೇದ :- ೭-೧೦೪-೨೨]
[ಸುಪರ್ಣಯಾತುಂ – ಗರುಡನ ನಡೆಯನ್ನು, ಜಹಿ – ಬಲಿಹಾಕು.]

ವೇದ ಐದನೆಯ ರಕ್ಷಸ್ಸಿನ ಬಗ್ಗೆ ಹೇಳಿರುವ ಮಾತು. **"ಸುಪರ್ಣ ಯಾತುಂ ಜಹಿ"**-ಎಂಬುದೇ. (ಸುಪರ್ಣ) ಎಂದರೆ ಗರುಡ (ಯಾತು) ಎಂದರೆ ನಡೆ ಹೀಗೆ (ಸುಪರ್ಣಯಾತು) ಗರುಡನ ನಡೆ ಎಂದಾಗುತ್ತದೆ. ಗರುಡನನ್ನು ನೋಡದಿರುವವರಾರು? ಪೌರಾಣಿಕರು ಚತುರ್ಭುಜನಾದ ಮಹಾವಿಷ್ಣುವಿಗೆ ಗರುಡನನ್ನು ವಾಹನವಾಗಿ ಆರಿಸಿಕೊಟ್ಟಿದ್ದಾರೆ. ಯಾರೆಷ್ಟೇ ಮೇಲಕ್ಕೆತ್ತಿ ದರೂ ಗರುಡ ಒಂದು ಪಕ್ಷಿಯೇ ತಾನೇ? ಅದರ ಸ್ವಭಾವವೇನು? ಯಾರಾ ದರೂ ನೋಡಬಹುದು. ಆಹಾರ-ವಿಹಾರಗಳ ವಿಷಯದಲ್ಲಿ, ಬೇರೆ ಹಕ್ಕಿ ಗಳಿಗಿಂತ ಯಾವ ರೀತಿಯಲ್ಲಿಯೂ ಉತ್ತಮವಾಗಿಲ್ಲವಾದರೂ, ಗರುಡ ಕುಳಿತುಕೊಳ್ಳುವುದು ಮರದ ಎಲ್ಲಕ್ಕಿಂತ ಎತ್ತರವಾದ ಕೊಂಬೆಯ ಮೇಲೆಯೇ. ಬೇರೆ ಹಕ್ಕಿಗಳು ಹತ್ತಿರ ಬಂದರೆ – ಕೊರಳೆತ್ತಿ ಒಂದು ಬಗೆಯ ಹೆಮ್ಮೆಯಿಂದ – "ನನಗೀ ಪಿಡುಗುಗಳು ಸಮವೇ?" – ಎಂದು ಪ್ರಶ್ನಿಸು ವಂತೆ ನೋಡುತ್ತದೆ. ಅದಕ್ಕೆ ತನ್ನ ಸೌಂದರ್ಯದಲ್ಲಿ ಅಳತೆ ಮೀರಿದ ನಂಬಿಕೆ. ಎಂದರೆ 'ಗರ್ವ'ವೇ ಸುಪರ್ಣಯಾತು–ಎಂದು ಹೇಳಿದಂತಾಯಿತು.

ಗರ್ವವನ್ನು ಅಚ್ಚಕನ್ನಡದಲ್ಲಿ ಜಂಬ ಅಥವಾ ತಲೆಹಿಡುಕತನ-ಎಂದು ಕರೆಯಬಹುದು. ಜಂಬಗಾರ ವೈಯಕ್ತಿಕ, ಪಾರಿವಾರಿಕ, ಸಾಮಾಜಿಕ, ವ್ಯಾವಹಾರಿಕ-ಮೊದಲಾದ ಸರ್ವ ಕ್ಷೇತ್ರಗಳಲ್ಲಿಯೂ ಇತರರ ಸದ್ಭಾವನೆಯನ್ನೂ, ಸಹಕಾರವನ್ನೂ ಕಳೆದುಕೊಳ್ಳುತ್ತಾನೆ. ಎಲ್ಲ ರೀತಿಯಲ್ಲಿಯೂ ಯಾರಿಗೂ ಬೇಡದವನಾಗುತ್ತಾನೆ. ಇದೆಲ್ಲಾ ಸತ್ಯ. ಆದರೆ – ಗರ್ವಿಷ್ಠನಿಗೆ ಎಲ್ಲಕ್ಕಿಂತ ಭಾರೀ ನಷ್ಟವುಂಟಾಗುವುದು ಜ್ಞಾನದ ಕ್ಷೇತ್ರದಲ್ಲಿ. ಗರ್ವ ಅಥವಾ ಅಹಂಕಾರ, ಜ್ಞಾನ-ಪ್ರಾಪ್ತಿಯ ಪ್ರಶಸ್ತ ಮಾರ್ಗದಲ್ಲಿ ಚೆಲ್ಲಿದ ಮುಳ್ಳೇ ಸರಿ. ಜ್ಞಾನವಿಲ್ಲದೆ ಮಾನವತ್ವ ಸಿದ್ಧಿಸದು; ಗರ್ವವಿದ್ದಲ್ಲಿ ಜ್ಞಾನ ಒಂದು ಸ್ವಪ್ನವೇ ಸರಿ. ಹೀಗಾಗಿ, ಅಹಂಕಾರಿಯಾದವನು ಪಶುತ್ವದ ಕಡೆಗೇ ಮುಖಮಾಡಿ ಸಾಗುತ್ತಾನೆ. ಇನ್ನು ಆತ್ಮೋನ್ನತಿಯ ಆಸೆ ಉಳಿದೀತಾದರೂ ಎಂತು?

ಗರ್ವ – ಎಂಬುದೇನು **ತನ್ನ ವಿಷಯದಲ್ಲೇ ತನಗೆ ಬೆಳೆದು ಬರುವ, ಅತಿಶಯವಾದ ಹೆಚ್ಚುಗಾರಿಕೆ ಭಾವನೆಯೇ ಗರ್ವ** ಸಂಸ್ಕೃತದಲ್ಲದನ್ನು "ಅಹಮ್ಮನ್ಯತೆ" ಎನ್ನುತ್ತಾರೆ. ಸಾಧಾರಣವಾಗಿ ಕುಲ, ಅಕ್ಷರವಿದ್ಯೆ, ಸಂಪತ್ತು, ಅಧಿಕಾರ, ರೂಪ ಮತ್ತು ಯೌವನ - ಈ ಕಾರಣಗಳಿಂದ ಮಾನವನಿಗೆ ಈ ಗರ್ವ ಹುಟ್ಟುತ್ತದೆ. "ನಾನು ಉತ್ತಮ ಕುಲದವನು, ನಾನು ನಾಲ್ಕಾರು ಡಿಗ್ರಿ ಪಡೆದ ಪ್ರಚಂಡ - ವಿದ್ವಾಂಸ, ನಾನು ಕೋಟ್ಯಾಧೀಶ್ವರನ ಮಗ ಅಥವಾ ಸ್ವತಃ ಕೋಟ್ಯಾಧೀಶ್ವರ, ನಾನು ಮುಖ್ಯಮಂತ್ರಿಯಲ್ಲವಾದರೆ ಒಬ್ಬ ಮಂತ್ರಿಯಂತೂ ಅಹುದೇ ಅಹುದು; ನಾನು ಅಪ್ರತಿಮ ರೂಪವಂತ, ನನಗೀಗ ತುಂಬು ಯೌವನ" – ಹೀಗೆಂದುಕೊಂಡು ತಾನು ತಲೆ ಮರೆತು ಕುಣಿಯುವ ಹತಭಾಗ್ಯನೇ ನಿಜವಾಗಿ ಗರ್ವಿಷ್ಟ. ಗರ್ವಿಷ್ಠನು ಶತ್ರುಗಳನ್ನು ಮಿತ್ರರನ್ನಾಗಿ ಮಾಡಿಕೊಳ್ಳುವ ಭಾಗ್ಯವನ್ನಂತೂ ಪಡೆದೇ ಇರುವುದಿಲ್ಲ; ಸಾಲದೆಂದು, ತನ್ನ ಹಿತೈಷಿಗಳಾದ ಸುಹೃದಯರನ್ನೂ ತನ್ನ ಗರ್ವದ ಫಲವಾಗಿ ಎದುರು ಹಾಕಿಕೊಳ್ಳುತ್ತಾನೆ. ಗರ್ವವು ಸರ್ವನಾಶದ ಸರ್ವೋಚ್ಚ ಸಾಧನ.

ಮಾನವ ಗರ್ವಿಷ್ಠನೇಕಾಗಬೇಕು? ಇವನೆಷ್ಟು ಲಕ್ಷ ಗ್ರಂಥಗಳನ್ನು ಮಗುಚಿ ಹಾಕಿದರೆ ತಾನೇ ಸರ್ವಜ್ಞನ ಈ ಅದ್ಭುತ ವಿಶ್ವದಲ್ಲಿ ಕಲಿಯಬೇಕಾ

ಗಿರುವ ವಿದ್ಯೆಯ ಒಂದು ಕಣದ ಅರ್ಧ ಭಾಗದಷ್ಟಾದರೂ ಕಲಿಯಬಲ್ಲನೇ? ಎಷ್ಟು ಕೋಟಿ ಧನ ಕೂಡಿ ಹಾಕಿದರೆ ತಾನೇ, ಈ 'ಸ್ವರ್ಣಗರ್ಭಾ ವಸುಂಧರೆ'ಯ ಸಂಪತ್ತಿನ ಸಹಸ್ರ ಕೋಟ್ಯಂಶಕ್ಕಾದರೂ ಮಾಲಿಕನಾಗ ಬಲ್ಲನೇ? ಇಂದು ರಾಜನಾದವನು ನಾಳೆ ತಿರುಕ; ಇಂದು ರೂಪ ಯೌವನ ಸಂಪತ್ತಿನಾದವನೇ ನಾಳೆ ಬಿಳಿಗೂದಲಿನ, ನಡುಬಾಗಿದ, ಬೊಕ್ಕುಬಾಯಿನ, ಜರ್ಜರಕಾಯನಾದ ತಲೆನಡುಗುವ ಮುದುಕ ! ಕುಲವಾದರೂ ಭಗವಂತನ ರಚನೆಯೇ ? ಅಲ್ಪಶಕ್ತನೂ, ಅಲ್ಪಜ್ಞನೂ, ಅಲ್ಪನೂ ಆದ ಮಾನವನು ಜಂಬಪಡುವುದಕ್ಕೆ ಕಾರಣವಾದರೂ ಏನಿದೆ? ವೇದ ಏನು ಹೇಳುತ್ತಿದೆಯೋ ಕೇಳಿರಿ :—

**ಏಷ ವಃ ಸ್ತೋಮೋ ಮರುತೋ ನಮಸ್ವಾನ್ ಹೃದಾ ತಷ್ಟೋ ಮನಸಾ ಧಾಯಿ ದೇವಾಃ । ಉಪೇಮಾ ಯಾತ ಮನಸಾ ಜುಷಾಣಾ ಯೂಯಂ ಹಿ ಷ್ಠಾ ನಮಸ ಇದ್ವೃಧಾಸಃ ॥**

[ಋಗ್ವೇದ :- ೧. ೧೧೭.೨]

[ದೇವಾಃ] ಸತ್ಯಮಯರೇ! ಪ್ರಮಾದರಹಿತರೇ! [ಮರುತಃ] ಮರಣ ಧರ್ಮರಾದ ಮಾನವರೇ! [ವಃ] ನಿಮಗಾಗಿ [ಹೃದಾ] ಹೃದಯದಿಂದ, [ಮನಸಾ] ಮನಸ್ಸಿನಿಂದ, [ತಷ್ಟಃ] ವಿವೇಚಿಸಲ್ಪಟ್ಟ, [ಏಷ] ಈ, [ಸ್ತೋಮಃ] ಉಪದೇಶವು, [ಧಾಯಿ] ಕೊಡಲ್ಪಟ್ಟಿದೆ. [ಮನಸಾ] ಮನ ದಿಂದ, [ಜುಷಾಣಾಃ] ಪ್ರೀತಿತೋರುತ್ತಾ, [ಈಂಉಪ] ಇದಕ್ಕೆ ಹತ್ತಿರ, [ಆಯಾತ] ಬನ್ನಿರಿ. [ಹಿ] - ಏಕೆಂದರೆ, [ಯೂಯಂ] ನೀವು, [ನಮಸಃ ಇತ್]– ನಮಸ್ಕಾರದಿಂದಲೇ, ವಿನಯದಿಂದಲೇ, [ವೃಧಾಸಃ] ವರ್ಧಿಸತಕ್ಕ ವರು. ಈ ಮಂತ್ರದ ಮೇಲೆ ಟಿಪ್ಪಣಿ ಏಕೆ? ವೇದ ನೀಡುವುದು ವಿನಯ ಪೂರ್ಣವಾದ ಉಪದೇಶವನ್ನು; ಏಕೆಂದರೆ-ಮಾನವರ ಏಳಿಗೆಯಾಗುವುದು ಅಹಂಕಾರದಿಂದಲ್ಲ; ವಿನಯದಿಂದ. ಅಹಂಕಾರಿಯಾದವನು – "ನನಗಾರು ದಾರಿ ತೋರಬಲ್ಲಧೀರರು ? ನಾನೇ ಸರ್ವಜ್ಞ" – ಎಂದುಕೊಳ್ಳುತ್ತಾ, ಎಲ್ಲೆಡೆಯೂ, ಎಲ್ಲರ ಸಹಾನುಭೂತಿಯನ್ನೂ ಕಳೆದುಕೊಂಡು, ನಷ್ಟಭ್ರಷ್ಟ ನಾಗಿ ಹೋಗುತ್ತಾನೆ. ಗರ್ವಿಷ್ಠನು, ವಿನಯ ಅಶಕ್ತತೆಯ ಕುರುಹೆಂದು

ತಿಳಿಯುತ್ತಾನೆ. 'ಗರ್ವವೇ ವರ್ಚಸ್ಸಿನ ಚಿಹ್ನೆ' – ಎಂಬ ತಪ್ಪು ನಂಬಿಕೆಯಿಂದ ಬಾರಿ ಬಾರಿ ಮುಗ್ಗರಿಸುತ್ತಾ ಹೋಗುತ್ತಾನೆ. ವಸ್ತುತಃ ವಿನಯೆ ದೊಡ್ಡತನದ ಲಕ್ಷಣವೇ ಹೊರತು, ಅಶಕ್ತತೆಯ ಕುರುಹಲ್ಲ, ಕೇಳಿರಿ – ವೇದವಾಣಿಯನ್ನು :-

**ನಮ ಇದುಗ್ರಂ ನಮ ಆ ವಿವಾಸೇ ನಮೋ ದಾಧಾರ ಪೃಥಿವೀಮುತ ದ್ಯಾಂ । ನಮೋ ದೇವೇಭ್ಯೋ ನಮ ಈಶ ಏಷಾಂ ಕೃತಂ ಚಿದೇನೋ ನಮಸಾ ವಿವಾಸೇ ॥**

[ಋಗ್ವೇದ : – ೬–೫೧–೮]

[ನಮಃ ಇತ್] ವಿನಯುವೇ, [ಉಗ್ರಂ] ಪ್ರಚಂಡ ಶಕ್ತಿ. [ನಮಃ] ವಿನಯುವೇ, [ಪೃಥಿವೀಂ] ಈ ಲೋಕವನ್ನೂ, [ದಾಧಾರ] ಎತ್ತಿಹಿಡಿಯುತ್ತದೆ. [ದೇವೇಭ್ಯಃ] ವಿದ್ವಜ್ಜನರಿಗೆ [ನಮಃ] ನಮಸ್ಕಾರ, [ಏಷಾಂ] ಅವರನ್ನು, [ನಮಃ] ವಿನಯಗುಣವೇ, [ಈಶೇ] ಆಳುತ್ತದೆ. [ಕೃತಂ] ಹಿಂದೆ ಮಾಡಿದ [ಏನಃಚಿತ್] ತಪ್ಪನ್ನೂ ಕೂಡ, [ನಮಸಾ] ವಿನಯದಿಂದ [ವಿವಾಸೇ] ದೂರಮಾಡುತ್ತೇನೆ. ವಸ್ತುತಃ, ವಿನಯ ಒಂದು ಮಹಾ ಶಕ್ತಿ; ಎಲ್ಲರನ್ನೂ ಒಲಿಸಿಕೊಳ್ಳುವ ಚಮತ್ಕಾರಿಣೀ ಶಕ್ತಿಯದು. ವಿನಯದಿಂದ, ಎಲ್ಲೆಡೆಯಿಂದಲೂ ಜ್ಞಾನಕಣವನ್ನು ಸಂಚಯಿಸುತ್ತಾ ಹೋಗುವ ಭಾಗ್ಯಶಾಲಿಗೆ, ಈ ಲೋಕ-ಪರಲೋಕ ಎರಡೂ ಸುಖವಾಗಿಯೇ ಲಭಿಸುತ್ತವೆ. ವಿದ್ವಾಂಸರಾದವರು – ಡಿಗ್ರೀಹೋಲ್ಡರುಗಳೇ ವಿದ್ವಾಂಸರೆಂದಲ್ಲ – ಜ್ಞಾನಿಗಳಾದವರು ಆಳಲ್ಪಡುವುದು ದರ್ಪದಿಂದಲ್ಲ; ವಿನಯದಿಂದಲೇ **"ವಿದ್ಯಾ ದದಾತಿ ವಿನಯಂ–"** ಎಂದು ಹೇಳಿಯೇ ಇಲ್ಲವೇ? ವಿದ್ಯೆ ಕೊಡುವುದು ವಿನಯುವನ್ನೇ ಹೊರತು ದರ್ಪ ಅಥವಾ ಗರ್ವವನ್ನಲ್ಲ. ಯಾವನೆಷ್ಟು ಕಲಿಯುತ್ತಾ ಹೋಗುತ್ತಾನೋ ಅವನು, ಅಷ್ಟಷ್ಟೇ ವಿನಯಶಾಲಿಯಾಗುತ್ತಾ ಹೋಗುತ್ತಾನೆ. ಕೇಳಿರಿ:–

**ಯದಾ ಕಿಂಚಿಜ್ಞೋಽಹಂ ಗಜ ಇವ ಮದಾಂಧಃ ಸಮಭವಂ**
**ತದಾ ಸರ್ವಜ್ಞೋಽಸ್ಮೀತ್ಯ ಭವದವಲಿಪ್ತಂ ಮಮ ಮನಃ ।**

**ಯದಾ ಕಿಂಚಿತ್ಕಿಂಚಿದ್ಬುಧ ಜನ ಸಕಾಶಾದವಗತಂ ತದಾ**
**ಮೂರ್ಖೋಽಸ್ಮೀತಿ ಜ್ವರ ಇವ ಮದೋ ಮೇ ವ್ಯಪಗತಃ ॥**
[ಭರ್ತೃಹರಿ, ನೀತಿಶತಕ-೨]

"ನನಗೆ ಅತಿಸ್ವಲ್ಪ ತಿಳುವಳಿಕೆಯಿದ್ದಾಗ. ಮದ್ದಾನೆಯಂತೆ ಜಂಬದಿಂದ ಕುರುಡನಾದೆ. ಆಗ 'ನಾನು ಸರ್ವಜ್ಞ' ಎಂಬ ತಾಪದಿಂದ ನನ್ನ ಮನಸ್ಸು ಮುಚ್ಚಿತು. ಯಾವಾಗ ವಿದ್ವಜ್ಜನರ ಕಡೆಯಿಂದ ಕೊಂಚ ಕೊಂಚ ಜ್ಞಾನ ಲಭಿಸಿತೋ, ಆಗ 'ನಾನು ಮೂರ್ಖ' ಎಂದು ತಿಳಿದು, ನನ್ನ ಜಂಬ ಜ್ವರದಂತೆ ಇಳಿದು ಹೋಯಿತು". ಭರ್ತೃಹರಿಗಿಂತ ಚೆನ್ನಾಗಿ, ಗರ್ವದ ಬೆನ್ನು ಮುರಿಯಲು ಸಾಧ್ಯವಿಲ್ಲ. ಜಗತ್ತಿನ ಎಲ್ಲ ಸೌಭಾಗ್ಯಗಳಿಗಿಂತ ದೊಡ್ಡ ಸೌಭಾಗ್ಯ ಜ್ಞಾನವೇ ಅಲ್ಲವೇ? ಬೇರೆಲ್ಲಾ ಸಂಪತ್ತೂ ಅಸ್ಥಿರ, ಚಂಚಲ. ದುಡ್ಡಿದ್ದರೆ ಹಂಚಿಕೊಳ್ಳುವ ಒಡಹುಟ್ಟುಗಳು; ತಿಂದು ತೇಗುವ ಸ್ವಾರ್ಥೀ ಹಿತೈಷಿಗಳು, ಯೌವನ-ರೂಪು_ಎಲ್ಲ ಮುದಿತನದ ಕಾಲಿಗೆ ಮುತ್ತಿಟ್ಟು ಶೂನ್ಯ ವಿಲೀನವಾಗತಕ್ಕವು, ಬೇರೆಲ್ಲಾ ಸಂಪತ್ತೂ ವ್ಯಯವಾಗತಕ್ಕದ್ದೇ. ಆದರೆ ವಿದ್ಯಾಧನ? ಹಾಗಲ್ಲ;-

**ನ ಚೌರಹಾರ್ಯಂ ನ ಚ ರಾಜಹಾರ್ಯಂ ನ ಭ್ರಾತೃಭಾಜ್ಯಂ**
**ನ ಚ ಭಾರಕಾರಿ । ವ್ಯಯೇ ಕೃತೇ ವರ್ಧತ ಏವ ನಿತ್ಯಂ**
**ವಿದ್ಯಾಧನಂ ಸರ್ವಧನ ಪ್ರಧಾನಂ ॥**

"ಕಳ್ಳನು ಅಪಹರಿಸಲಾರನು; ರಾಜನು ಕಸಿದುಕೊಳ್ಳನು. ಅಣ್ಣ ತಮ್ಮಂದಿರು ಪಾಲುಕೇಳುವಂತಿಲ್ಲ; ಎಷ್ಟು ಸಂಪಾದಿಸಿದರೂ ಭಾರವೂ ಆಗುವುದಿಲ್ಲ. ಎಷ್ಟೆಷ್ಟು ಬೇರೆಯವರಿಗೆ ಕೊಡುತ್ತಾ ಹೋಗುತ್ತೇವೋ, ಅಷ್ಟಷ್ಟೂ ಹೆಚ್ಚುತ್ತಾ ಹೋಗುತ್ತದೆ. ಆದುದರಿಂದ ವಿದ್ಯಾಧನವು ಎಲ್ಲ ಧನಗಳಿಗಿಂತಲೂ ಮಿಗಿಲು" **"ಯಯಾ ವೇತ್ತಿ ಸಾ ವಿದ್ಯಾ"** ಯಾವುದರಿಂದ ಜ್ಞಾನ ಬರುವುದೋ, ಅದೇ ವಿದ್ಯೆ; ಕೇವಲ ಪುಸ್ತಕ ಮಗುಚಿಹಾಕುವ, ಶಬ್ದ ವಿದ್ಯೆ ವಿದ್ಯೆಯಲ್ಲ, ಅಂದರೆ ಜ್ಞಾನದ ಸಾಧನ ವಿದ್ಯೆ. ಅಂತಹ ವಿದ್ಯೆ, ಎಲ್ಲರಿಂದಲೂ

ಎಲ್ಲೆಡೆಯಿಂದಲೂ ಕಲಿಯಬೇಕೆಂಬ, ನಿಗರ್ವಿಯಾದ ಮಾನವನಿಗೆ ಮಾತ್ರ ಲಭಿಸುತ್ತದೆ. ವೇದ ಸ್ಪಷ್ಟವಾಗಿಯೇ ಮೊಳಗುತ್ತಿದೆ:-

**ಯತ್ಪೂರ್ವ್ಯಂ ಮರುತೋ ಯಚ್ಚ ನೂತನಂ ಯದುದ್ಯತೇ**
**ವಸವೋ ಯಚ್ಚ ಶಾಸ್ಯತೇ । ವಿಶ್ವಸ್ಯ ತಸ್ಯ ಭವತಾ ನವೇದಸಃ**
**ಶುಭಂ ಯಾತಾಮನುರಥಾ ಅವೃತ್ಸತ ॥** [ಋಗ್ವೇದ ೫, ೫೫. ೮]

[ಮರುತಃ] ಮಾನವರೇ, [ವಸವಃ] ದೇಹ ನಿವಾಸಿಗಳೇ, [ಯತ್] ಯಾವುದು, [ಪೂರ್ವ್ಯಂ] ಹಳೆಯದೋ, [ಚ] ಮತ್ತು [ಯತ್] ಯಾವುದು [ನೂತನಂ] ಹೊಸದೋ, [ಯತ್] ಯಾವುದು, [ಉದ್ಯತೇ] ಸಾಧಾರಣರಿಂದ ಹೇಳಲ್ಪಡುತ್ತದೋ, [ಚ] ಮತ್ತು [ಯತ್] ಯಾವುದು, [ಶಸ್ಯತೇ] ವಿದ್ವಾಂಸರಿಂದ ಶಾಸ್ತ್ರರೂಪವಾಗಿ ವಿಧಿಸಲ್ಪಡುತ್ತದೋ, [ತಸ್ಯ] ಆ, [ವಿಶ್ವಸ್ಯ] ಎಲ್ಲಕ್ಕೂ ಸೇರಿದವರು, ಎಲ್ಲವನ್ನೂ ಆಲಿಸುವವರು. [ಭವತ] ಆಗಿರಿ. (ಏಕೆಂದರೆ) ನವೇದಸ= ನೀವು ಅಜ್ಞಾನಿಗಳು [ಶುಭಂ] ಕಲ್ಯಾಣದತ್ತ, [ಯಾತಾಂ] ಹೋಗುವವರ, [ಅನು] ಹಿಂದೆ, [ರಥಾಃ] ನಿಮ್ಮ ಜೀವನ ರಥಗಳು, [ಅವೃತ್ಸತ] ಸಾಗಲಿ" ವಸ್ತುತಃ ಸತ್ಯ ಜ್ಞಾನಕ್ಕೆ ಹಳೆಯದು, ಹೊಸದು ಎಂಬ ಭೇದವಿಲ್ಲ, ಸತ್ಯ ಜ್ಞಾನವನ್ನು ತಿಳಿಸಬಲ್ಲವರು ಸುಪಠಿತರೇ ಆಗಿರಬೇಕು; ಸಾಧಾರಣರಿಂದ ನಾವು ಕಲಿಯಬೇಕಾದುದು, ಏನೂ ಇಲ್ಲ-ಎಂಬ ಭಾವನೆಯೂ ತಪ್ಪೇ; ಪಾಮರರ ಮಾತುಗಳಿಂದಲೂ, ಪಂಡಿತರ ಪ್ರವಚನಗಳಿಂದಲೂ ನಾವು ಕಲಿಯಬೇಕಾದ್ದು ಎಷ್ಟೋ ಇರುತ್ತದೆ. ಏಕೆಂದರೆ ನಾವು 'ನವೇದಸಃ' ಏನೂ ತಿಳಿಯದ, ಎಷ್ಟರಿತರೂ ಇನ್ನೂ ಅರಿಯಬೇಕಾದ ಅನಂತ ಜ್ಞಾನದ ಅಭಿಲಾಷೆಯುಳ್ಳ ಅಲ್ಪಜ್ಞರಾದ ಜೀವರೇ! ಎಲ್ಲವನ್ನೂ, ಎಲ್ಲರಿಂದಲೂ ಕೇಳಿ ತಿಳಿಯಬೇಕು; ಯಾವುದು ಶುಭವೋ, ಅದನ್ನು ಒಪ್ಪಿಕೊಳ್ಳಬೇಕು, ಇದು ವಿನಯ ಶಾಲಿಗೆ ಮಾತ್ರ ಸಾಧ್ಯ; ಗರ್ವಿಗೆ ಈ ರಹಸ್ಯ ತಿಳಿಯುವಂತೆಯೇ ಇಲ್ಲ. ಜ್ಞಾನ ಸಂಪಾದನೆಯ ಮಾರ್ಗವನ್ನು ಯೋಗಿರಾಜ ಶ್ರೀಕೃಷ್ಣ ಎಷ್ಟು ಚೆನ್ನಾಗಿ ಹೇಳಿದ್ದಾನೆ:-

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥**

[ಗೀತಾ ೪, ೩೪]

"ತತ್ತ್ವದರ್ಶಿಗಳಾದ ಜ್ಞಾನಿಗಳು ನಿನಗೆ ಜ್ಞಾನೋಪದೇಶ ಮಾಡುವರು. ನೀನು ಅದನ್ನು ಪ್ರಣಿಪಾತ, ಪರಿಪ್ರಶ್ನೆ ಮತ್ತು ಸೇವೆ–ಈ ಮೂರು ಸಾಧನಗಳಿಂದ ಸಂಪಾದಿಸು." ಎಲ್ಲಕ್ಕೂ ಮೊದಲು ಮುಂದುವರಿಯ ಬಯಸುವ ಜ್ಞಾನಾರ್ಥಿಗೆ ಬೇಕಾದ ಗುಣ–ಪ್ರಣಿಪಾತ ಎಂದರೆ ಬಾಗುವ ಭಾವನೆ ಹದವಾದ ವಿನಯಗುಣ. ತಲೆಹಿಡುಕನು ಯಾರ ಮುಂದೆ ತಾನೆ ಬಾಗುವನು? ಬಾಗದೆ ಗರ್ವದಿಂದ ಸೆಟೆದು ನಿಂತು, ಒರಟಾಗಿ ಪ್ರಶ್ನೆ ಹಾಕುವವನಿಗೆ ಯಾವನು ತಾನೇ ಜ್ಞಾನದಾನ ಮಾಡಬಲ್ಲ? "ಮಿಸ್ಟರ್! ಇಷ್ಟು ರೂಪಾಯಿ ಕೊಟ್ಟುಬಿಡುತ್ತೇನೆ. ಪಾಠ ಹೇಳಿ" ಎಂದು ಮಾತನಾಡುವ ಅಹಂಕಾರಿ, ಗುರುವಿಗೆ ಸೇವೆತಾನೇ ಏನು ಸಲ್ಲಿಸಬಲ್ಲ? ಗುರುಹಿರಿಯರನ್ನು ತ್ರಿಕರಣಶುದ್ಧಿ ಪೂರ್ವಕವಾಗಿ ಗೌರವಿಸುವುದು ಗರ್ವಿಷ್ಠನಿಗೆ ಸಾಧ್ಯವೇ ಇಲ್ಲ. ಆದುದರಿಂದ ಅವನು ಕಲಿತ ವಿದ್ಯೆ ಕೇವಲ ಶಬ್ದಜಾಲದ ರೂಪದಲ್ಲಿ, ಪುಸ್ತಕದ ಬದನೆಕಾಯಿಯಾಗಿ ಉಳಿಯಬಹುದೇ ಹೊರತು, ಅದು ಅವನ ಬಾಳಿಗಿಳಿದು ರೂಪಿಸಲಾರದು. ಅಹಂಕಾರಿಯು ಓದಿದರೂ ತಲೆ ಮರೆತೇ ಇರುತ್ತಾನೆ; ಎಂತಹ ಭಯಂಕರ ಪರಿಸ್ಥಿತಿಯಿದು? ಜ್ಞಾನ ಸಂಪಾದನೆಯ ಮಾರ್ಗಕ್ಕೆ ಸಾಧನವಾದ ವಿನಯಗುಣ ಒಂದಿದ್ದರೆ–ವಿದ್ಯೆ ಮತ್ತು ಅವರ ಹಿಂದೆ ಸಮಸ್ತ ಐಶ್ವರ್ಯಗಳೂ ತಾವಾಗಿಯೇ ಬರುತ್ತವೆ, ವಿನಯಶಾಲಿಯು ಎಲ್ಲ ರೀತಿಯಿಂದಲೂ ಸಮೃದ್ಧನಾಗುತ್ತಾನೆ. ವಿನಯವು ಎಂತು ಉನ್ನತಿ ಸಾಧನವೋ ಅಂತೇ ಹಿರಿತನದ ಕುರುಹೂ ಆಗಿರುತ್ತದೆ. ಭರ್ತೃಹರಿ ಹೇಳಿದ್ದಾನೆ:—

**ಭವಂತಿ ನಮ್ರಾಸ್ತರವಃ ಫಲೋದ್ಗಮೈರ್ನವಾಂಬುಭಿರ್ದೂರ**
**ವಿಲಂಬಿನೋ ಘನಾಃ। ಅನುದ್ಧತಾಃ ಸತ್ಪುರುಷಾಃ ಸಮೃದ್ಧಿಭಿಃ**
**ಸ್ವಭಾವ ಏವೈಷ ಪರೋಪಕಾರಿಣಾಂ ॥** [ನೀತಿಶತಕ: ೭೦]

"ಹಣ್ಣುಗಳು ಬಿಟ್ಟಾಗ ಮರಗಳು ಬಾಗುತ್ತವೆ; ಮಳೆಗರೆವ ನೀರು ತುಂಬಿದಾಗ, ಮೋಡಗಳು ನಿಧಾನವಾಗಿ ಸರಿಯುತ್ತವೆ; ಸಮೃದ್ಧಿ ಬಂದಾಗ ಸತ್ಪುರುಷರು ನಮ್ರರಾಗಿರುತ್ತಾರೆ. ಇದು ಪರೋಪಕಾರಿಗಳ ಸ್ವಭಾವವೇ ಸರಿ." ಫಲವಿಲ್ಲದ ಮರ ಆಕಾಶದತ್ತ ನೋಡುತ್ತದೆ. ಮಳೆಯಾಗಿ ಸುರಿಯು ಲಾರದ ಮೋಡ, ಹತ್ತಿಯಂತೆ, ಬೇಗ ಬೇಗ ಹಾರಿ ಹೋಗುತ್ತದೆ. ಗರ್ವಿಷ್ಠ ನಿಗೆ ಸಂಪತ್ತು ಬಂದರೆ ಅದೇ ರೀತಿ ಒರಟಾಗಿ ವರ್ತಿಸುತ್ತಾನೆ. ಇದರಿಂದ ಆತ್ಮ ವಿಕಾಸಕ್ಕೆ ನಿರ್ಮಲವಾದ ಚಾರಿತ್ರ ನಿರ್ಮಾಣಕ್ಕೆ ಎಷ್ಟು ದೊಡ್ಡ ಧಕ್ಕೆ ತಗಲುವುದೆಂಬುದನ್ನೂ ಅಹಂಕಾರಿ ತಿಳಿದುಕೊಳ್ಳಲಾರ. ಅವನ ಗರ್ವ ಅವನನ್ನು ವಿದ್ವಜ್ಜನರ, ಮಹಾತ್ಮರ, ಆತ್ಮದರ್ಶಿಗಳ ಬಳಿ ಕುಳಿತುಕೊಳ್ಳಲು ಬಿಡುವುದಿಲ್ಲ. ಏಕೆಂದರೆ ಅವನಿಗೆ, ತನ್ನನ್ನು ಬಿಟ್ಟು ಬೇರಾರ ದೊಡ್ಡಸ್ತಿಕೆ ಯಲ್ಲೂ ನಂಬಿಕೆಯೇ ಇರುವುದಿಲ್ಲ! ಇನ್ನವನು ಕಲಿಯುವುದಾದರೂ ಏನು? ಇನ್ನು ಕಲಿಯದ ಮಾನವನ ಬಾಳೂ ಒಂದು ಮಾನವೀಯ ಜೀವನವೇ? ಗರ್ವ ಕಠೋರತ್ವದ ಕುರುಹು; ಕಠೋರವಾದ ವಸ್ತು ಹಿಗ್ಗಲಾರದು; ಮುರಿದೇನೋ ಹೋಗುವುದು. ವಿನಯ ಮೃದುತ್ವದ ಕುರುಹು; ಮೃದು ವಾದ ವಸ್ತು ಹಿಗ್ಗುವುದು: ಮುರಿಯುವುದಿಲ್ಲ. ವಿಕಾಸಬೇಕೆ? ಹಾಗಾದರೆ ವಿನಯಶಾಲಿಗಳಾಗಿರಿ, ಹ್ರಾಸ ಬೇಕೆ? ಹಾಗಾದರೆ ಗರ್ವಿಷ್ಠರಾಗಿ ಓಡಾಡಿರಿ. ಇಷ್ಟು ಮಾತ್ರ ನೆನಪಿರಲಿ. ಗರ್ವ ತಲೆಯನ್ನು ತಿರುಗಿಸುತ್ತಿರುವ ವರೆಗೆ, ನಿಜವಾದ ಉನ್ನತಿ ಒಂದು ಕನಸು ಮಾತ್ರ; ಆದುದರಿಂದ, ಓ ಸಾಧಕ! **"ಸುವರ್ಣಯಾತುಂ ಜಹಿ"** ಗರುಡನ ನಡೆಯನ್ನು ಜಂಬವನ್ನು ಬಲಿಹಾಕು.

## ೧೦

# ಹದ್ದಿನ ನಡೆಯನ್ನು ಬಲಿಹಾಕು

ಪ್ರಿಯ ಮಾನವಾದರ್ಶಪ್ರೇಮಿಗಳೇ! ನಾವು ಇದುವರೆಗೆ ಐದು ಭಯಂ ಕರ ರಕ್ಷಸ್ಸುಗಳನ್ನು ಮಾತನಾಡಿಸಿಕೊಂಡು ಬಂದಿದ್ದೇವೆ; ಇನ್ನೊಂದು ಉಳಿ ದಿದೆ ಅವನಾರು, ನೋಡೋಣ ಬನ್ನಿ:—

**ಉತ ಗೃಧ್ರಯಾತುಂ ಜಹಿ** [ಋಗ್ವೇದ: ೭, ೧೦೪, ೨೨]

[ಉತ–ಮತ್ತು, ಗೃಧ್ರಯಾತುಂ–ಹದ್ದಿನ ನಡೆಯನ್ನು ಜಹಿ–ಹೊಡೆ]

ಆರನೆಯದನ್ನು ವೇದ 'ಗೃಧ್ರಯಾತು' ಎಂದು ಕರೆದಿದೆ. ಗೃಧ್ರ ಎಂದರೆ ಹದ್ದು; ಯಾತು ಎಂದರೆ ನಡೆ, ಎರಡೂ ಸೇರಿದರೆ ಹದ್ದಿನ ನಡೆ ಎಂದಾಗುತ್ತದೆ. ಹದ್ದಿನ ನೋಟ ಸೊಟ್ಟು; ಕೂಗು ಸೊಟ್ಟು; ಮಿತಿಮೀರಿದ ಆಸೆ ಅದರ ವಿಶೇಷ ಗುಣ. ಇದ್ದುದೆಲ್ಲಾ ತನಗೇ ಇರಲಿ–ಎಂಬ ಲೋಭದ ಭಾವನೆಯೇ ಹದ್ದಿನ ನಡೆ. ಹದ್ದಿನಂತೆಯೇ ಲೋಭಿಯಾದ ಮನುಷ್ಯ ಎಲ್ಲವನ್ನೂ ನೋಡುವುದು ವಕ್ರದೃಷ್ಟಿಯಿಂದಲೇ , ಅವನ ಮಾತೂ ವಕ್ರ ವಕ್ರವೇ. ಹಾಗೆ ನೋಡಿದರೆ ಈವರೆಗೆ ಹೇಳಿದವೆಲ್ಲಾ ಭಯಂಕರವೇ; ಆದರೆ ಅವುಗಳಿಂದ ವ್ಯಕ್ತಿಗೆ ಹೆಚ್ಚು ಅಪಾಯ; ಸಮಾಜಕ್ಕೆ ಅಷ್ಟಿಲ್ಲ. ಈ ಲೋಭದ ರೀತಿಯೇ ಬೇರೆ, ಇದು ವ್ಯಕ್ತಿಯನ್ನೇನೋ ಮುಳುಗಿಸಿಯೇ ಬಿಡುತ್ತದೆ; ಜೊತೆಯಲ್ಲಿ ಸಮಾಜವನ್ನೂ ಪತನದ ಆಳವಾದ ಕೂಪದಲ್ಲಿ ಅದ್ದಿ ಬಿಡುತ್ತದೆ. **'ಅರಾತಿ'** ಎಂಬ ಶಬ್ದಕ್ಕೆ 'ಅ+ ರಾತಿ'–ದಾನಹೀನ ಸ್ವಾರ್ಥಿ ಎಂದು ಅರ್ಥವಿದೆ. ಕಾಮ–ಕ್ರೋಧಾದಿಗಳ ಹಿಂದೆಯೂ ಸ್ವಾರ್ಥ ವಿರಬಹುದಾದರೂ, ಸ್ವಾರ್ಥದ ಪೂರ್ಣ ವಿಕಸಿತವಾದ ಕುರೂಪವನ್ನು ನಾವು 'ಲೋಭ'ದಲ್ಲೇ ಕಾಣಲು ಸಾಧ್ಯ. ಆದುದರಿಂದ, ಮುಖ್ಯಾರ್ಥದಲ್ಲಿ ಲೋಭವೇ 'ಅರಾತಿ'. ವೇದ ಹೇಳುತ್ತಿದೆ:–

**ಉತ ಸ್ವಸ್ಯಾ ಅರಾತ್ಯಾ ಅರಿರ್ಹಿಷಃ ಉತಾನ್ಯಸ್ಯಾ**
**ಅರಾತ್ಯಾವೃಕೋ ಹಿ ಷಃ ||** [ಋಗ್ವೇದ ೯, ೭೯, ೩]

ಎಂದರೆ, ಮಾನವನು [ಸ್ವಸ್ಯಾಃ] ತನ್ನ, [ಅರಾತ್ಯಾ] ಲೋಭದಿಂದ, [ಉತ] ನಿಜವಾಗಿ, [ಅರಿಃಹಿ] ಶತ್ರುವೇ ಸರಿ. [ಉತ] ಮತ್ತು [ಅನ್ಯಸ್ಯಾಃ] ಬೇರೆಯುವನದಾದ [ಅರಾತ್ಯಾ] ಲೋಭದಿಂದ, [ಸಃ] ಅವನು, [ವೃಕಃ ಹಿ] ತೋಳನಂತೆ ಕ್ರೋಧಿಯೇ ಆಗುತ್ತಾನೆ. ಈ ಮಂತ್ರದ ಒಂದೊಂದು ಶಬ್ದವೂ ಮನನೀಯ, ರಾಮನಲ್ಲಿ ಲೋಭವಿದೆ–ಎಂದಿಟ್ಟುಕೊಳ್ಳಿ. ಆ

ಲೋಭಿಯಾದ ರಾಮ. ಸ್ವಾರ್ಥಿಯಾಗಿ, ಅನ್ಯಾಯದಿಂದ ಅರ್ಥಸಂಚಯ ಮಾಡುವವನಾಗಿ. ಸಮಾಜಕ್ಕೆ ಶತ್ರುವೇ ಆಗಿ ಹೋಗುತ್ತಾನೆ. ರಾಮನಲ್ಲಿ ಲೋಭವಿಲ್ಲ; ಭೀಮನಲ್ಲಿದೆ - ಎಂದಿಟ್ಟುಕೊಳ್ಳಿ. ಆ ಭೀಮನ ಲೋಭ, ರಾಮನಲ್ಲಿ ಭಯಂಕರವಾದ ಉದ್ವೇಗವನ್ನು ಹುಟ್ಟಿಸುತ್ತದೆ. ತೋಳನಂತೆ ಕ್ರೋಧತೃಪ್ತನಾಗಿ, ಅವನು ರಕ್ತಕ್ರಾಂತಿಯನ್ನು ಎಬ್ಬಿಸಲು ಸನ್ನದ್ಧನಾಗುತ್ತಾನೆ. ಹೀಗೆ ಲೋಭ ತನ್ನಲ್ಲಿದ್ದರೂ ಅಭಿಶಾಪವೇ; ಬೇರೆಯುವರಲ್ಲಿದ್ದರೂ ಅಭಿಶಾಪವೇ. ಸಂಪೂರ್ಣ ಸಮಾಜವನ್ನೇ ಅಶಾಂತಿಯ ಅಗ್ನಿ ಕುಂಡಕ್ಕೆ ತಳ್ಳುವ ಘೋರ ರಕ್ಷಸ್ಸು ಈ ಲೋಭ. ಜಗತ್ತಿನ ಇತಿಹಾಸ ವೇದದ ಈ ಕಥನದ ಸತ್ಯತ್ವವನ್ನು ಸಾರುತ್ತಿದೆ. ಕಮ್ಯೂನಿಸಂ ನಂತಹ ಭೀಭತ್ಸ ಸಿದ್ಧಾಂತಗಳಿಗೆ ಕಾರಣ ಬಡವರಲ್ಲ; ಲೋಭಿಗಳಾದ ಶ್ರೀಮಂತರು! ಆಸ್ತಿಕವಾದ, ಅಧ್ಯಾತ್ಮಜ್ಞಾನ, ಸದಾಚಾರ ಎಲ್ಲ ಸತ್ಪ್ರವೃತ್ತಿಗಳೂ ಮೂಲ ಸಹಿತ ನಾಶವಾಗಿ, ಮಾನವಸಮಾಜ ಪಶುಗಳ ಮಟ್ಟಕ್ಕೆ ಇಳಿದುಬಿಡುವಂತಹ ಭಯಾನಕ ಪರಿಸ್ಥಿತಿಯನ್ನು ತರುವವರು ಇದೇ ಲೋಭಿಗಳು ಏಕೆಂದರೆ— ಶ್ರೀಮಂತಿಕೆ ಸಾಧುವಾದ ಸಾಧನಗಳಿಂದ ಈವರೆಗೆ ಯಾರಿಗೂ ಲಭಿಸಿಲ್ಲ; ಮುಂದೆ ಲಭಿಸುವುದೂ ಇಲ್ಲ. ಕೇಳಿರಿ! ಮಹರ್ಷಿ ವ್ಯಾಸರ ಅರ್ಥಗರ್ಭಿತ ವಾಕ್ಯವನ್ನು;-

**ನಾಚ್ಛಿತ್ವಾ ಪರಮರ್ಮಾಣಿ ನಾಕೃತ್ವಾ ಕರ್ಮದಾರುಣಂ ।**
**ನಾಹತ್ವಾ ಮತ್ಸ್ಯಘಾತೀವ ಪ್ರಾಪ್ನೋತಿ ಮಹತೀಂ ಶ್ರಿಯಂ ॥**

[ಮಹಾಭಾರತ, ಆದಿಪರ್ವ ೧೩೯, ೭೭]

ಎಂದರೆ, "ಬೇರೆಯುವರ ಹೃದಯವನ್ನು ಸೀಳದೆ, ಕ್ರೂರವಾದ ವ್ಯವಹಾರಗಳನ್ನು ನಡೆಸದೆ, ಬೆಸ್ತನಂತೆ ಪ್ರಾಣವಧೆ ಮಾಡದೆ, ಮಾನವ ಮಹದೈಶ್ವರ್ಯ ಪಡೆಯಲಾರನು" ಇದು ಸತ್ಯ, ಪ್ರಾಮಾಣಿಕತೆಯಿಂದ, ಸತ್ಯಮಾರ್ಗದಿಂದ, ಮಾನಮರ್ಯಾದೆಗಳೊಂದಿಗೆ ಸಾತ್ವಿಕ ಜೀವನ ನಡೆಸಲು ಬೇಕಾದಷ್ಟು ಧನವೇನೋ ಸಿಗಬಹುದು; ಆದರೆ, ಭೋಗವಿಲಾಸಮಯವಾದ ಸುಖದ ಸುಪ್ಪತ್ತಿಗೆಯಲ್ಲೇ ಸತತವೂ ಉರುಳಾಡುವಂತಹ ರಾಜಸ ಜೀವನ

ನಡೆಸಲು ಬೇಕಾದ ಮಹದೈಶ್ವರ್ಯ ಸಿಕ್ಕಲಾರದು, ಲೋಭಿಗೆ ಅಲ್ಪೈಶ್ವರ್ಯ ದಿಂದ ತೃಪ್ತಿಯಾದರೂ ಎಲ್ಲಿ? ಅದಕ್ಕಾಗಿ ಅವನು ಜೂಜು, ಸಟ್ಟಾ, ಲಾಟರಿ ಕಾಳಸಂತೆ—ಇಂತಹ 'ತಪ್ಪು' ಸಾಧನೆಗಳಿಗೆ ಶರಣಾಗಬೇಕಾದೀತು. ಜನ ಸಾಧಾರಣರ ಆರೋಗ್ಯ, ಸೌಜನ್ಯ, ಮರ್ಯಾದೆ ಎಲ್ಲಕ್ಕೂ ದೊಡ್ಡದೊಂದು ಸೊನ್ನೆ ಸುತ್ತುವ ಹೊಗೇಸೊಪ್ಪು, ಮದ್ಯ, ಮಾಂಸ ಮೊದಲಾದುವುಗಳ ವ್ಯಾಪಾರಕ್ಕಿಳಿಯಬೇಕಾದೀತು. ವಕಾಲತ್ತು, ಚಿಕಿತ್ಸೆ, ಧರ್ಮಪ್ರಚಾರ— ಮೊದಲಾದ ಮೂಲತಃ ಪವಿತ್ರವಾದ ಕ್ಷೇತ್ರಗಳಲ್ಲಿಯೂ ಹೊಲಸು ಹರಡಿ ಸಂಪತ್ತನ್ನು ಸಂಗ್ರಹಿಸಬೇಕಾದೀತು. ಇದಾವುದೂ ಬೇಡವೆಂದಾದರೆ, ಕೊನೆಗೆ ಒಬ್ಬ 'ಪೊಲಿಟಿಕಲ್ ಲೀಡರ'ನಾಗಿ, ಮುಖ್ಯ ಮಂತ್ರಿಯೋ, ಉಪಮಂತ್ರಿಯೋ ಆಗಬೇಕಾದೀತು! ಈ ರೀತಿ ಮಾಡಿದರೆ ಮಾತ್ರ ಸಮಾಜ ದಲ್ಲಿ ಸೀಮಾರಹಿತ ಸಂಪತ್ತು ಸಂಚಯಿಸಲು ಸಾಧ್ಯ. ಆದರೆ ಇಂತಹ ಲೋಭಗಳನ್ನು ಸಮಾಜ ತಾನೇ ಎಷ್ಟು ಕಾಲ ಸಹಿಸೀತು? ಹಿಂಸಾಮಯ ಕ್ರಾಂತಿಯ ಪ್ರಳಯಾಗ್ನಿ ಜ್ವಾಲೆಯಲ್ಲಿ ಕೆಟ್ಟದರ ಜೊತೆಗೆ ಒಳ್ಳೆಯದೂ ಸುಟ್ಟು ಭಸ್ಮವಾಗುವ ಕಾಲ ಇದರಿಂದ ಬಂದೇ ಬರುವುದು, ಲೋಭತ್ವದ ಸ್ವಾರ್ಥ ಬಲಿತು ವಿದ್ಯಾಕ್ಷೇತ್ರವೂ ಹೊಲಸು ರೂಪ ತಾಳಿದೆ.

ಆದುದರಿಂದ, ಹೇ ಮಾನವ! ಎಚ್ಚೆತ್ತುಕೋ. ಲೋಭಕ್ಕೆ ಮಿತಿಯಾ ದರೂ ಯಾವುದಿದೆ? ವ್ಯಾಸರು ಹೇಳಿಯೇ ಇದ್ದಾರೆ:–

**ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।**
**ಏಕಸ್ಯಾಪಿ ನಪರ್ಯಾಪ್ತಂ ತಸ್ಮಾತ್ತೃಷ್ಣಾಂ ಪರಿತ್ಯಜೇತ್॥**

[ಮಹಾಭಾರತ, ಆದಿಪರ್ವ ೮೫, ೧೩]

"ಜಗತ್ತಿನಲ್ಲಿ ಎಷ್ಟು ದವಸ ಧಾನ್ಯಗಳಿವೆಯೋ, ಎಷ್ಟು ಚಿನ್ನ ವಿದೆಯೋ, ಎಷ್ಟು ಪಶುಗಳೂ, ಸ್ತ್ರೀಯರೂ ಇದ್ದಾರೋ ಎಲ್ಲವೂ ಒಬ್ಬ ನಿಗೇ ಸಿಕ್ಕಿದರೂ ಸಹ ಸಾಲದೆನಿಸುತ್ತದೆ. ಆದುದರಿಂದ – ಲೋಭವನ್ನು ಬಿಟ್ಟುಬಿಡಬೇಕು" ನೀನೇತಕ್ಕಾಗಿ ಸಂಪತ್ತನ್ನು ಸಂಚಯಿಸಬಯಸುವೆ? ನಿನ್ನ ಸಲುವಾಗಿಯೇ? ನಿನ್ನ ಸಂಗಡ ಒಂದು ಸವಕಲು ನಾಣ್ಯವಾದರೂ ಹೋಗ

ತಕ್ಕದ್ದಿದೆಯೇ? ಕೇಳು ಧಾರಾನಗರದ ಭೋಜರಾಜನ ಹೆಸರು ನಿನಗೂ ಗೊತ್ತಿದೆ. ಅವನ ತಂದೆ, ಅವನಿನ್ನೂ ಚಿಕ್ಕವನಾಗಿದ್ದಾಗಲೇ ತೀರಿ ಕೊಂಡ ತನ್ನ ತಮ್ಮ ಮುಂಜನ ವಶಕ್ಕೆ ಕುಮಾರನನ್ನು ಒಪ್ಪಿಸಿ ಹೋದ. ಮುಂಜ ನಿಗೆ ಲೋಭ ಹತ್ತಿಕೊಂಡಿತು. ರಾಜಕುಮಾರನನ್ನು ಕೊಲ್ಲಿಸಿ, ತಾನೇ ರಾಜನಾಗಲು ನಿರ್ಧರಿಸಿದ. ಬಾಲಕ ಭೋಜನನ್ನು ಕೊಲ್ಲಿಸುವಂತೆ ಆಜ್ಞಾಪಿಸಿದನು. ಆದರೆ–ಮಂತ್ರಿ ಚತುರ; ರಾಜಕುಮಾರನನ್ನು ಬಚ್ಚಿಟ್ಟು, ಕೊಲ್ಲಿಸಿದೆ ಎಂದು ಹೇಳಿಬಿಟ್ಟ. ಭೋಜ ಬರೆದಿದ್ದ ಒಂದು ಶ್ಲೋಕವನ್ನು ಮುಂಜನ ಕೈಗಿತ್ತು–ನಿನ್ನ ಅಣ್ಣನ ಮಗ, ಸಾಯುವಾಗ ನಿನಗೆ ಈ ಸಂದೇಶ ಕೊಟ್ಟಿದ್ದಾನೆ" ಎಂದ! ಆ ಶ್ಲೋಕವಿದು :—

**ಮಾಂಧಾತಾ ಕ್ವ ಮಹೀಪತಿಃ ಕೃತ ಯುಗೇಽಲಂಕಾರ**
**ಭೂತೋ ಗತಃ । ಸೇತುರ್ಯೇನ ಮಹೋದಧೌ ವಿರಚಿತ**
**ಕ್ವಾಸೌ ದಶಾಸ್ಯಾಂತಕಃ । ಅನ್ಯೇಚಾಪಿ ಯುಧಿಷ್ಠಿರ**
**ಪ್ರಭೃತಯೋ ಹ್ಯಸ್ತಂಗತಾ ಭೂಪತೇ । ನೈಕೇನಾಪಿ**
**ಸಮಂಗತಾ ವಸುಮತೀ ಮುಂಜ ತ್ವಯಾ ಯಾಸ್ಯತಿ ॥**

"ಹೇ ನನ್ನ ಚಿಕ್ಕಪ್ಪ! ಕೃತಯುಗದಲ್ಲಿ ಜಗತ್ತಿಗೇ ಭೂಷಣ ಪ್ರಾಯ ನಾಗಿದ್ದ ಸಮ್ರಾಟ್ ಮಾಂಧಾತಾ ಎಲ್ಲಿಹೋದ? ಯಾವನು ಮಹಾಸಾಗರ ದಲ್ಲಿ ಸೇತುವೆ ಕಟ್ಟಿದನೋ, ಆ ಶ್ರೀರಾಮಚಂದ್ರ ಎತ್ತಹೋದ? ಇನ್ನೂ ಯುಧಿಷ್ಠಿರನೇ ಮೊದಲಾದ ಅದೆಷ್ಟೋ ಜನ ಚಕ್ರವರ್ತಿಗಳು ಮರೆಯಾ ದರು; ಅವರಲ್ಲಿ ಯಾವನೊಬ್ಬನ ಹಿಂದೆಯೂ ಈ ಸ್ವರ್ಣಮಯವಾದ ಭೂಮಿ ಹೋಗಲಿಲ್ಲ. ರಾಜಾ ಮುಂಜ! ಪ್ರಾಯಶಃ ನಿನ್ನ ಹಿಂದೆ ಹೋದೀತು!" ಓದುತ್ತೋದುತ್ತಾ ಮುಂಜನ ಕಣ್ಣುಗಳಿಂದ ಅಶ್ರುಧಾರೆ ಸುರಿದು ಹೋಯಿತು. ಇಷ್ಟೇ ತಾನೇ ಈ ಭೌತಿಕ ಸಂಪತ್ತುಗಳ ಸ್ಥಿತಿ ಯೆಲ್ಲಾ? ಏನಂದೆ? 'ನನಗಾಗಿ ಅಲ್ಲ; ನನ್ನ ಮಕ್ಕಳಿಗಾಗಿ'–ಎನ್ನುತ್ತೀಯಾ? ಸೋದರ! ಮುಗ್ಧನಾಗಬೇಡ - ತಂದೆ ಮಕ್ಕಳಿಗೆ ಕೊಡಬಹುದಾದ ಎಲ್ಲ ಕ್ಕಿಂತ ಶ್ರೇಷ್ಠವಾದ ಸಂಪತ್ತು 'ವಿದ್ಯಾಧನ' ಎಂಬುದನ್ನು ಮರೆಯಬೇಡ.

ನಿನ್ನ ಮಕ್ಕಳನ್ನು ಸೋಮಾರಿಗಳನ್ನಾಗಿಯೂ, ನಿರುಪಯೋಗಿಗಳನ್ನಾಗಿಯೂ, ವಿಲಾಸಿಗಳನ್ನಾಗಿಯೂ ಮಾಡಬೇಕೆಂಬ ಉದ್ದೇಶ್ಯನಿನಗಿದ್ದರೆ, ಆಸ್ತಿ-ಪಾಸ್ತಿ ಬಿಟ್ಟುಹೋಗು. ಅವರನ್ನು ಮಾನವರನ್ನಾಗಿಮಾಡಬೇಕೆಂಬ ಉದ್ದೇಶ್ಯ ವಿದ್ದರೆ – ಅವರಿಗೆ ವಿದ್ಯೆ ಕೊಟ್ಟು ಹೋಗು. ಮತ್ತೇ ನೋ ಪಿಸುಗುಟ್ಟುತ್ತಿದ್ದೀಯಲ್ಲ! ಇರುವವರೆಗೆ ಸುಖವಾಗಿ ತಿಂದುಂಡು ಹೋಗುವೆ" – ಎನ್ನುವೆಯಾ? ಕೇಳು! ನೂರು ಜನರಿಗೆ ಕಣ್ಣೀರು ತರಿಸಿ, ನೂರು ಜನರನ್ನು ಉಪವಾಸ ಗೆಡಹಿ, ನೀನು ಮಾತ್ರ ತಿಂದುಂಡು ಸುಖವಾಗಿರಬಲ್ಲೆ – ಎಂದು ಭಾವಿಸಬೇಡ. ಅದು ಧರ್ಮವೂ ಅಲ್ಲ. ನಿನ್ನ ಧನ-ಲೋಭ ಜನ-ಕ್ಷೋಭಕ್ಕೆ ಕಾರಣ ಎಂಬುದನ್ನು ಮರೆಯಬೇಡ. ನಿನ್ನ ಲೋಭ, ನಿನ್ನನ್ನು ಮಾತ್ರವಲ್ಲ, ಸಂಪೂರ್ಣ ಸಮಾಜವನ್ನೇ ಅನರ್ಥದ ಅಗ್ನಿ ಕುಂಡದಲ್ಲಿ ಕೆಡಹುವುದೆಂಬುದನ್ನು ಅರೆಕ್ಷಣವೂ ಮರೆಯಬೇಡ. ಆದುದರಿಂದ, ಓ ಮಾನವ! ಮಾನವನಾಗಿಯೇ ಜೀವಿಸು. ಭೋಗೈಶ್ವರ್ಯಪ್ರಧಾನ ಜೀವನ ಬೇಡ; ಶುದ್ಧ ಮಾನವಜೀವನ ನಡೆಸು, ಕೇಳು ಈ ವೇದ ಮಂತ್ರವನ್ನು:—

**ಅಕ್ಷೈರ್ಮಾ ದೀವ್ಯಃ ಕೃಷಿಮಿತ್ಕೃಷಸ್ವ ವಿತ್ತೇ ರಮಸ್ವ ಬಹು ಮನ್ಯಮಾನಃ । ತತ್ರಗಾವಃ ಕಿತವ ತತ್ರ ಜಾಯಾ ತನ್ಮೇ ವಿ ಚಷ್ಟೇ ಸವಿತಾಯಮರ್ಯಃ ।** [ಋ. ೧೦.೩೪.೧೩]

[ಕಿತವ] ನಿನ್ನದೇನು ಹೋಗುವುದು – ಎಂದು ಹೋರಾಡುವ ಲೋಭಿಯೇ! [ಅಕ್ಷೈಃ] ದಾಳಗಳಿಂದ, ಅನ್ಯಾಯಕರವಾದ ಸಾಧನಗಳಿಂದ, [ಮಾ ದೀವ್ಯಃ] ವ್ಯವಹಾರ ಮಾಡಬೇಡ. [ಕೃಷಿಂ ಇತ್] ವ್ಯವಸಾಯವನ್ನೇ, ಪರಿಶ್ರಮವನ್ನೇ, [ಕೃಷಸ್ವ] ಅವಲಂಬಿಸು. [ಬಹು ಮನ್ಯ ಮಾನಃ] ಸಿಕ್ಕಿದುದನ್ನೇ ಬಹಳವೆಂದರಿತು, ನ್ಯಾಯವಾದ ಸಂಪಾದನೆಯನ್ನೇ ಗೌರವಿಸುತ್ತಾ, [ವಿತ್ತೇ ರಮಸ್ವ] ಬಂದ ಹಣದಿಂದ ತೃಪ್ತನಾಗು. [ತತ್ರ] ಆ ಸ್ಥಿತಿಯಲ್ಲೇ, [ಗಾವಃ] ಗೋಸಂಪತ್ತೂ, [ತತ್ರ] ಆ ಸ್ಥಿತಿಯಲ್ಲೇ, [ಜಾಯಾ] ಪತ್ನಿಯೂ ಇರುವುದು. [ಅಯಂ] ಈ, [ಸವಿತಾ] ಜಗದುತ್ಪಾದಕನಾದ, [ಅರ್ಯಃ] ಸ್ವಾಮಿಯು, [ತತ್] ಅದನ್ನೇ, [ಮೇ ವಿಚಷ್ಟೇ]

ನನಗೆ ಹೇಳುತ್ತಿದ್ದಾನೆ, ಹೇ ಮಾನವ! ಕೇಳಿದೆಯಾ ವೇದವಾಣಿಯನ್ನು? ಅನ್ಯಾಯ ಮಾಡಿ ಲಕ್ಷ ಸಂಪಾದಿಸಿದರೇನು? ಕೋಟಿ ಸಂಪಾದಿಸಿದರೇನು? ಆ ಸಂಪತ್ತು ಸಂಪತ್ತಲ್ಲ; ಘೋರವಿಪತ್ತು. ಏಕೆಂದರೆ–೧೦೦೦ ಜನರನ್ನು ಸುಲಿದು ನೀನೊಬ್ಬನು ಸುಖಿಸಿದರೆ, ಸಮಾಜದಲ್ಲಿ ಸುಖದ ಸಾವಿರ ಪಾಲು ದುಃಖವೇ ಇರುವುದು. ಆ ದುಃಖದಲ್ಲಿ ನಿನ್ನ ಸುಖ ಮುಳುಗಿಹೋಗಲು ಬಹುಕಾಲ ಬೇಕಾಗಿಲ್ಲ. ಆದುದರಿಂದ-ಶ್ರಮಪಟ್ಟು, ಪ್ರಾಮಾಣಿಕತೆಯಿಂದ ಸಂಪಾದನೆ ಮಾಡು. ಮಹದೈಶ್ವರ್ಯವೇನೋ ಸಿಕ್ಕುವುದಿಲ್ಲ; ಆದರೆ–ಸಾವಿರ ಜನರ ಸ್ನೇಹ, ಸದ್ಭಾವನೆ, ಸೌಹಾರ್ದ ನಿನಗೆ ಸಿಕ್ಕುತ್ತದೆ. ಆದುದರಿಂದ, ಆ ಶಾಂತ ವಾತಾವರಣದಲ್ಲಿ, ಮಧುರ ಮಾನವೀಯ ವಾಯುಮಂಡಲದಲ್ಲಿ. ಕಷ್ಟಪಟ್ಟ ಮೇಲೆ ಎಷ್ಟು ಸಿಕ್ಕುವುದೋ, ಅಷ್ಟನ್ನೇ ಬಹಳವೆಂದರಿತು, ಗೌರವಪೂರ್ವಕವಾಗಿ, ಆನಂದದಿಂದ ಬಾಳು; ಬೇರೆಯವರನ್ನು ಬಾಳಗೊಡುವುದರಿಂದ ಬರುವ ಆತ್ಮಿಕ ಸುಖದ ಸವಿಯಲ್ಲಿ ಮೈಮರೆ, ಹೀಗೆ ಬಾಳಿದರೆ ಮಾತ್ರ ನಿನಗೆ 'ಗೋವುಗಳು' ಸಂಪತ್ತಾಗಿ ಬಂದಾವು: ಲೋಭಿಯಾದಲ್ಲಿ ಅವೇ ವಿಪತ್ತಾದಾವು! ನಿರ್ಲೋಭನಾಗಿ ಬಾಳಿದರೆ, ನಿನ್ನ ಕೈಹಿಡಿದವಳು ನಿಜವಾಗಿ ನಿನ್ನ ಜೀವನ-ಸಂಗಿನಿಯೇ ಆಗಿ ಉಳಿದಾಳು; ಲೋಭಿಯಾಗಿ, ಅವಳ ಹಿತವನ್ನೂ ಲಕ್ಷಿಸದೆ, ಐಶ್ವರ್ಯಮದದಲ್ಲಿ ವಿಪರೀತ ಕಾಮಾಸಕ್ತನಾಗಿ ಅನ್ಯ ಸ್ತ್ರೀಯರಲ್ಲಿ ಆಸಕ್ತನಾಗುವೆಯಾದರೆ – ಆ ನಿನ್ನ ನಾರಿಯೇ ಹೆಮ್ಮಾರಿಯಾದಾಳು ! ಹೀಗೆ ಇತ್ತ ನಿನ್ನ ಸಂಸಾರವೇ ನಿನ್ನ ಶತ್ರು! ಯಾಕೀ ಕಿತವಜೀವನ? ಯಾತಕ್ಕೀ ಲೋಭಮಯ ಶ್ರೀಮಂತಿಕೆ? ಆದುದರಿಂದ ಹೇ ಮಾನವ! ಬಲಿಹಾಕು ಈ ಲೋಭವೆಂಬ ಕ್ರೂರ ರಕ್ಷಸ್ಸನ್ನು ನೆನಪಿಡು. ನಿಜವಾದ ಶ್ರೀಮಂತಿಕೆ ಅಥವಾ ನಿಜವಾದ ದಾರಿದ್ರ್ಯ ಇರುವುದು ಚಿನ್ನ ಬೆಳ್ಳಿಗಳ-ವಜ್ರವೈಡೂರ್ಯಗಳ, ಆಸ್ತಿ-ಪಾಸ್ತಿಗಳ ರಾಶಿಯಲ್ಲಿ ಅಥವಾ ಅವುಗಳ ಅಭಾವದಲ್ಲಿ ಅಲ್ಲ. ಭರ್ತೃಹರಿ ಹೇಳಿದ್ದಾನೆ :—
**"ಸ ತು ಭವತು ದರಿದ್ರೋ ಯಸ್ಯತೃಷ್ಣಾ ವಿಶಾಲಾ, ಮನಸಿ ಚ ಪರಿತುಷ್ಟೇ ಕೋಽರ್ಥವಾನ್ ಕೋ ದರಿದ್ರಃ ।"** – "ಯಾವನ ಆಸೆ ದೊಡ್ಡದಾಗಿದೆಯೋ, ಯಾವನ ಲೋಭಕ್ಕೆ ಮಿತಿಯಿಲ್ಲವೋ, ಅವನು

ಕೋಟ್ಯಾಧೀಶನಾದರೂ ದರಿದ್ರನೇ! ಅವನು "ಇನ್ನೂ ಸಾಲದು; ಇನ್ನೂ ಸಾಲದು" ಎಂದು ಹಾತೊರೆಯುತ್ತಲೇ ಸಾಯುತ್ತಾನೆ. ಮನಸ್ಸು ಪರಿತುಷ್ಟ ವಾದಲ್ಲಿ, ಮನಸ್ಸಿಗೆ ತೃಪ್ತಿಯಿದ್ದಲ್ಲಿ. ಧನಿಕನಾರು? ದರಿದ್ರನಾರು?" ಆದುದ ರಿಂದ, ಮನಸ್ಸಿನ ಅತೃಪ್ತಿಯಲ್ಲೇ ನಿಜವಾದ ದಾರಿದ್ರ್ಯವಿದೆ. ಆದಕಾರಣ– **"ಗೃಧ್ರಯಾತುಂ ಜಹಿ"** – ಹದ್ದಿನ ನಡೆಯನ್ನು ಬಲಿಹಾಕು. ಮೊದಲು ಮಾನವನಾಗು. ಆ ಮೇಲೆ ಆದರ್ಶ ಮಾನವನಾಗುವೆಯಂತೆ !

೧೧

# ದೈವೀವೃತ್ತಿಗಳನ್ನು ಎಚ್ಚರಿಸಿರಿ

ಮಾನವತ್ವ ಪ್ರೇಮಿಗಳೇ! ನೀವು ಹಿಂದಿನ ಹತ್ತು ಅಧ್ಯಾಯಗಳಲ್ಲಿ ಮಾನವಜೀವನದ ಸ್ವರೂಪ ಮತ್ತು ಅದನ್ನು ವಿರೂಪಗೊಳಿಸಲು ಸದಾ ರಹಸ್ಯವಾಗಿಯೇ ಪ್ರಹಾರ ಮಾಡುತ್ತಿರುವ ಆರು ರಕ್ಷಸ್ಸುಗಳು ಅಥವಾ ರಾಕ್ಷಸೀ ವೃತ್ತಿಗಳು-ಇವುಗಳ ಬಗ್ಗೆ ಸಾಕಾದಷ್ಟು ಓದಿದ್ದೀರಿ. ಇನ್ನೆರಡು ಅಧ್ಯಾಯಗಳಲ್ಲಿ ಈ ಪುಸ್ತಕ ಸಮಾಪ್ತವಾಗಲಿದೆ. ಇದುವರೆಗೆ ಹೇಳಿರುವ ಮಾತುಗಳೆಲ್ಲಾ ನಿಮಗೆ ಹೃದಯಾಂಕಿತವಾಗಿದ್ದಲ್ಲಿ, ಮಾನವನ ಮಾನವತ್ವಕ್ಕೆ ಚ್ಯುತಿತರುವ, ಮಾನವನನ್ನು ದಾನವನನ್ನಾಗಿ ಮಾಡುವ ಅಂತಃಶತ್ರುಗಳು– ಅರಿಷಡ್ವರ್ಗ-ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯ-ಇವೇ ಎಂಬುದನ್ನು ನೀವು ಸ್ಪಷ್ಟವಾಗಿಯೇ ಗುರುತಿಸಿರು ತ್ತೀರಿ. ಮನುಷ್ಯ ಮಾಡುವ ಪ್ರತಿಯೊಂದು ಮಾನಸಿಕ, ವಾಚಿಕ ಹಾಗೂ ಶಾರೀರಿಕ ಪಾಪದ ಹಿಂದೆಯೂ ಈ ಆರರಲ್ಲಿ ಯಾವುದಾದರೂ ಒಂದು ರಾಕ್ಷಸೀ ವೃತ್ತಿ ಇದ್ದೇ ಇರುತ್ತದೆ.

ಮಾನವ ಆದರ್ಶಜೀವನ ನಡೆಸಬೇಕೆಂದೇನೋ ಅಪೇಕ್ಷಿಸುತ್ತಾನೆ, 'ಅಧ್ವರ'-ಎಂದರೆ ಹಿಂಸಾರಹಿತವಾದ 'ದೇವ-ಜೀವನ'ವನ್ನು ನಡೆಸಬೇಕೆಂಬ ಬಯಕೆ ಪ್ರಾಯಶಃ ಎಲ್ಲರಿಗೂ ಇದ್ದೇ ಇರುತ್ತದೆ. ಆದರೆ–ಈ ದೇವ– ಜೀವನ ನಡೆಸುವ ಬಯಕೆ ಕೇವಲ ಒಂದು ಬಯಕೆಯಾಗಿಯೇ ಉಳಿದು

ಹೋಗಿ, ಬಾಳು ಭಾರವಾಗಿ ಹೋಗುವ ಸಂದರ್ಭಗಳೇ ಹೆಚ್ಚು. ಇದರ ಕಾರಣ ಸ್ಪಷ್ಟವೇ ಆಗಿದೆ. ದೇವ-ಭಾವನೆಗಳು, ದೈವೀವೃತ್ತಿಗಳು ರಾಕ್ಷಸೀ ವೃತ್ತಿಗಳನ್ನು ಜಯಿಸದೆ, ದೇವಜೀವನ ನಡೆಸುವುದು ಸಾಧ್ಯವೇ ಆಗಲಾರದು. ದೈವೀವೃತ್ತಿಗಳಿಗೆ ಶತ್ರುಗಳೇ ರಾಕ್ಷಸೀವೃತ್ತಿಗಳು. **ಜ್ಞಾನ ದೈವೀ ವೃತ್ತಿ; ಮೋಹ ರಾಕ್ಷಸೀ ವೃತ್ತಿ. ಶಾಂತಿ ದೈವೀವೃತ್ತಿ; ಕ್ರೋಧ ರಾಕ್ಷಸೀವೃತ್ತಿ. ಔದಾರ್ಯ ದೈವೀವೃತ್ತಿ; ಈರ್ಷ್ಯೆ ರಾಕ್ಷಸೀವೃತ್ತಿ, ಸಂಯಮ ದೈವೀವೃತ್ತಿ; ಕಾಮ ರಾಕ್ಷಸೀವೃತ್ತಿ, ವಿನಯ ದೈವೀ ವೃತ್ತಿ; ಗರ್ವ ರಾಕ್ಷಸೀವೃತ್ತಿ. ತ್ಯಾಗ ದೈವೀವೃತ್ತಿ; ಲೋಭ ರಾಕ್ಷಸೀ ವೃತ್ತಿ.** ಈ ಪರಸ್ಪರ ವಿರೋಧೀ ವೃತ್ತಿಗಳ ಕಡೆ ಗಮನವಿತ್ತು ನೋಡಿರಿ. ಜ್ಞಾನ, ಶಾಂತಿ, ಔದಾರ್ಯ, ಸಂಯಮ, ವಿನಯ ಮತ್ತು ತ್ಯಾಗ-ಈ ಆರು ದೈವೀವೃತ್ತಿಗಳು ಎಂದಿನವರೆಗೆ ಜೀವನದಲ್ಲಿ ವ್ಯಾಪಿಸಿರುವುವೋ, ಅಂದಿನವರೆಗೂ ಮಾನವನ ಜೀವನ 'ಅಧ್ವರ'ವಾಗಿ ಹಿಂಸಾರಹಿತವಾಗಿ, 'ದೇವಜೀವನ'ವಾಗಿ ರಂಜಿಸುವುದು; ಪ್ರಕಾಶಮಯವಾದ ಜೀವನವಾಗಿರುವುದು; ಇವುಗಳಿಗೆ ಪ್ರತಿಯಾಗಿ, ಮೋಹ, ಕ್ರೋಧ, ಈರ್ಷ್ಯೆ, ಕಾಮ, ಗರ್ವ ಹಾಗೂ ಲೋಭ ಈ ರಾಕ್ಷಸೀವೃತ್ತಿಗಳು ಜೀವನಕ್ಕಿಳಿದರೆ, ಜೀವನ ಹಿಂಸಾಮಯವಾಗಿ 'ರಾಕ್ಷಸಜೀವನ'ವಾಗಿ ಮಾರ್ಪಡುವುದು; ಅಂಧಕಾರ ಮಯವಾಗಿರುವುದು. ಋಗ್ವೇದ, ಇದೇ ಕಾರಣದಿಂದ ಆದೇಶ ನೀಡುತ್ತಿದೆ.

**ವಿತಿಷ್ಠ ಧ್ವಂ ಮರುತೋ ವಿಕ್ಷ್ವಿಚ್ಛತ ಗೃಭಾಯತ ರಕ್ಷಸಃ**
**ಸಂಪಿನಷ್ಟನ । ವಯೋ ಯೇ ಭೂತ್ವೀಪತಯಂತಿ ನಕ್ತಭಿಃ**
**ಯೇ ವಾ ರಿಪೋದಧಿರೇ ದೇವೇ ಅಧ್ವರೇ ॥**

[ಋಗ್ವೇದ: -೭.೧೦೪.೧೮.]

[ಮರುತಃ] ಮರಣಧರ್ಮರಾದ, ಮರ್ತ್ಯರಾದ ಮಾನವರೆ! [ಇಚ್ಛತ] ಇಚ್ಛಾಶಕ್ತಿಯುಳ್ಳವರಾಗಿರಿ; ಧೃಡ ಸಂಕಲ್ಪ ಶಾಲಿಗಳಾಗಿರಿ. [ಯೇ] ಯಾವುವು. [ವಯಃ] ಹಾರುವಂತಹುವು, ಪತನಶೀಲ, [ಭೂತ್ವೀ] ಆಗಿ, [ನಕ್ತಭಿಃ] ರಾತ್ರಿಗಳಲ್ಲಿ, ಅಜ್ಞಾನದ ಕತ್ತಲಿನಲ್ಲಿ, [ಪತಯಂತಿ] ಹಾರಾಡು

ತ್ತವೋ, ಎದ್ದು-ಬಿದ್ದು ಮಾಡುತ್ತವೋ, [ವಾ] ಮತ್ತು. [ದೇವೇ] ದಿವ್ಯ ನಾದ ಆತ್ಮನ, [ಅಧ್ವರೇ] ಹಿಂಸಾರಹಿತ ಜೀವನದಲ್ಲಿ, [ರಿಪಃ] ಪಾಪ ವನ್ನು, [ದಧಿರೇ] ಉಂಟು ಮಾಡುತ್ತವೋ, ಆ, [ರಕ್ಷಸಃ] ರಾಕ್ಷಸೀವೃತ್ತಿ ಗಳನ್ನು, [ವಿತಿಷ್ಠಧ್ವಂ] ಎದುರಿಸಿ ನಿಲ್ಲಿರಿ. [ವಿಕ್ಷು] ಪ್ರಜೆಗಳಲ್ಲಿ, [ಅಡಗಿ ರುವ ಅವನ್ನು], ಗೃಭಾಯತ-ಹಿಡಿದುಕೊಳ್ಳಿರಿ [ಸಂ] ಚೆನ್ನಾಗಿ, ಒಟ್ಟು ಗೂಡಿ, [ಪಿನಷ್ಟನ] ಕುಟ್ಟಿಹಾಕಿರಿ. ಈ ಮಂತ್ರದ ಧ್ವನಿ ವೀರಗರ್ಜನದ ಧ್ವನಿ. ಅಳ್ಳೆದೆಯುವರು ರಾಕ್ಷಸೀ ವೃತ್ತಿಗಳೆಂಬ ಮುಳ್ಳುಗಳನ್ನು ಕಿತ್ತೆಸೆಯ ಲಾರರು, ಜೀವಾತ್ಮ ದೇವನಾಗಿ ಅಹಿಂಸಾಮಯವಾದ ಜೀವನವನ್ನು ನಡೆಸ ಬೇಕೆಂದಿದ್ದರೆ ಕತ್ತಲಿನಲ್ಲಿ, ಅವನ ಚಿತ್ತ ಪ್ರಮಾದವಶವಾದಾಗ, ಎಚ್ಚರ ತಪ್ಪಿದಾಗ, ಆ ದುರ್ಬಲಚಿತ್ತದ ಕಳ್ಳ ದಾರಿಯಿಂದೆ ಒಳಗೆ ನುಗ್ಗುತ್ತವೆ. ಈ ರಾಕ್ಷಸೀವೃತ್ತಿಗಳು. ದೇವನ-ಆತ್ಮನ-ದೇವಭಾವನೆಗಳನ್ನು ಹೊರದೂಡು ತ್ತವೆ; ಆ ಜಾಗವನ್ನು ಆಕ್ರಮಿಸಿಕೊಂಡು, ಗೆದ್ದಲ ಗೂಡಿನಲ್ಲಿ ಹಾವು ಸೇರಿಕೊಂಡಂತೆ ಸೇರಿಕೊಂಡು, ಅವನ ಹಿಂಸಾರಹಿತ ಜೀವನದಲ್ಲಿ 'ರಿಪಸ್' ಎಂದರೆ ಪಾತಕವನ್ನು ತುಂಬಿ ಬಿಡುತ್ತವೆ. ಆದುದರಿಂದಲೇ ವೇದ— **"ಇಚ್ಛತ - ಇಚ್ಛಾಶಕ್ತಿಯುಕ್ತರಾಗಿ; ದೃಢ ಸಂಕಲ್ಪಯುಕ್ತರಾಗಿ; ಚಿತ್ತ ಎಚ್ಚರ ತಪ್ಪಲು ಅವಕಾಶವನ್ನೇ ಕೊಡಬೇಡಿ"**-ಎಂದು ಆಜ್ಞಾ ಪಿಸುತ್ತಲಿದೆ.

ಚಿತ್ತ ಎಚ್ಚರತಪ್ಪದಂತಿರಲಿ; ದೇವಭಾವನೆಗಳ, ದೈವೀ ವೃತ್ತಿಗಳ ವಿಜಯ ನಿರಂತರ ಸಾಗುತ್ತಿರಲಿ; ರಾಕ್ಷಸೀ ವೃತ್ತಿಗಳ ದಮನ ಸಹಜ ವಾಗಿಯೇ ಆಗಲಿ-ಎಂಬ-ಉದ್ದೇಶ್ಯದಿಂದಲೇ ಆರ್ಯರು ತಮ್ಮ ದೈನಿಕ ಸಂಧ್ಯಾವಿಧಿಯಲ್ಲಿ ಪ್ರಾತಃಕಾಲ ಮತ್ತು ಸಾಯಂಕಾಲ 'ಉಪಸ್ಥಾನ ಮಂತ್ರ' ಗಳಲ್ಲಿ ಮನನ ಪೂರ್ವಕವಾಗಿ ಉಚ್ಚರಿಸಲು ಈ ಕೆಳಗಿನ ಮಂತ್ರವನ್ನು ಸೇರಿಸಿದ್ದಾರೆ :-

**ಉದ್ವಯಂ ತಮಸಸ್ಪರಿ ಸ್ವಃ ಪಶ್ಯಂತ ಉತ್ತರಂ ।**
**ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಂ ॥**

[ಯಜುರ್ವೇದಃ – ೩೫.೧೪]

(ವಯಂ)ನಾವು, (ತಮಸಃ) ತಮಸ್ಸಿನಿಂದ, ಅಜ್ಞಾನದಿಂದ (ಪರಿ) ಮೇಲಕ್ಕೆದ್ದು, (ಉತ್) ಪ್ರಕೃತಿಯನ್ನೂ, (ಉತ್ತರಂ) ಅದಕ್ಕಿಂತ ಶ್ರೇಷ್ಠ ನಾದ, (ಸ್ವಃ) ಸುಖಸ್ವರೂಪ ಜೀವಾತ್ಮನನ್ನೂ (ಪಶ್ಯಂತಃ) ನೋಡುತ್ತಾ, (ದೇವತ್ರಾ) ದಿವ್ಯ ತತ್ವಗಳ ಮಧ್ಯೆ, (ಉತ್ತಮಂ) ಸರ್ವಶ್ರೇಷ್ಠ, (ಜ್ಯೋತಿಃ) ಜ್ಯೋತಿಯಾದ, (ಸೂರ್ಯಂ) ಜಗತ್ಸಂಚಾಲಕನಾದ, (ದೇವಂ) ಪರಮಾತ್ಮ ನನ್ನು, (ಅಗನ್ಮ) ಹೊಂದೋಣ.

ಮಾನವತ್ವಪ್ರೇಮಿಗಳೇ! ನಾವು ಹಿಂದಿನ ಪ್ರಕರಣಗಳಲ್ಲಿ ವರ್ಣಿಸಿರುವ ಮೋಹ – ಮೊದಲಾದ ಕ್ಷುದ್ರವೃತ್ತಿಗಳು ಹುಟ್ಟುವುದಾದರೂ ಏತಕ್ಕೆ ? ಚಿತ್ತದ ಮುಂದೆ ಉತ್ತಮವಾದ ಆದರ್ಶವಿಲ್ಲದಿರುವುದರಿಂದಲೇ ತಾನೇ? ಭೌತಿಕ ಸುಖ–ಸಂತೋಷಗಳೇ ಸರ್ವಸ್ವ – ಎಂಬ ಭಾವನೆ ಬಲಿತಾಗಲೇ ರಾಕ್ಷಸೀ ವೃತ್ತಿಗಳಿಗೆ ಚಿತ್ತವನ್ನು ಸೂರೆಮಾಡಲು ಅವಕಾಶ ಸಿಕ್ಕುವುದು. ಕೇವಲ ಭೌತಿಕ ಮಟ್ಟದಲ್ಲೇ ಉಳಿದ ಮನಸ್ಸು, ಪ್ರಕೃತಿಯ ವಾಸ್ತವಿಕ ಸ್ವರೂಪವನ್ನೂ ಸಹ ಗ್ರಹಿಸಲಾರದೆ, ಅಜ್ಞಾನಾಂಧಕಾರದಲ್ಲಿ ಮುಗ್ಗರಿಸು ತ್ತಿರುವುದು. ಪ್ರಕೃತಿ 'ಉತ್'; ಜೀವಾತ್ಮ ಉತ್ತರ; ಪರಮಾತ್ಮ ಉತ್ತಮ- ಎಂಬ ತತ್ತ್ವದರ್ಶನ ಚಿತ್ತಕ್ಕಾದಲ್ಲಿ, ನೈಜ, ತರ, ತಮ–ಈ ರಹಸ್ಯ ಗೊತ್ತಾ ದಲ್ಲಿ, ತನಗಿಂತ ಕೆಳಮಟ್ಟದಲ್ಲಿರುವ ಪ್ರಕೃತಿಗೆ, ಪ್ರಾಕೃತಿಕ ಸುಖಗಳಿಗೆ ಮನಸೋಲದೆ, ಮಾನವ ತನಗಿಂತ ಶ್ರೇಷ್ಠನಾದ ಪರಮಾತ್ಮನ ಕಡೆ ಚಿತ್ತ ಹೊರಳಿಸುವುದರಲ್ಲಿ ಸಂದೇಹವೇ ಇಲ್ಲ. ಯಾವಾಗ ಭೌತಿಕಭೋಗವಿಲಾಸದ ಅಪೇಕ್ಷೆ, ಆಧ್ಯಾತ್ಮಿಕ ಆನಂದದ ಅಭಿಲಾಷೆಗೆ ಜಾಗಕೊಟ್ಟು ಶೂನ್ಯವಿಲೀನ ವಾಗುವುದೋ, ಆಗ ರಾಕ್ಷಸೀವೃತ್ತಿಗಳು ಸತ್ತು, ದೈವೀವೃತ್ತಿಗಳು ಜಾಗ್ರತ ವಾಗುವುವು. ಋಗ್ವೇದ ರಹಸ್ಯವನ್ನು ಈ ಕೆಳಗಿನ ಮಂತ್ರದಲ್ಲಿ ಸ್ಪಷ್ಟೀ ಕರಿಸುತ್ತಲಿದೆ :—

ಸ ಯೋ ನ ಮುಹೇ ನ ಮಿಥೂಜನೋಭೂತ್ಸುಮಂತು
ನಾಮಾ ಚುಮುರಿಂ ಧುನಿಂ ಚ । ವೃಣಕ್ಪಿಪ್ರುಂ ಶಂಬರಂ
ಶುಷ್ಣಮಿಂದ್ರಃ ಪುರಾಂ ಚ್ಯೌತ್ನಾಯ ಶಯಥಾಯ ನೂ ಚಿತ್ ॥
[ಋಗ್ವೇದ :- ೬–೧೮–೮]

(ಯಃ) ಯಾವನು (ನ ಮುಹೇ) ಮೋಹಗೊಳ್ಳುವುದಿಲ್ಲವೋ (ಮಿಥೂಜನಃ) ಅಸತ್ಯವಂತನು ಡಂಭಯುಕ್ತನು (ನ) ಅಲ್ಲವೋ (ಚಮುರಿಂ) ಈರ್ಷ್ಯೆಯನ್ನೂ (ಧುನಿಂಚ) ಕ್ರೋಧವನ್ನೂ (ಪಿಪ್ರುಂ) ಲೋಭವನ್ನೂ (ಶಂಬರಂ)ಗರ್ವ ವನ್ನೂ (ಶುಷ್ಣಂ) ಕಾಮವನ್ನೂ (ವೃಣಕ್) ನಾಶಮಾಡುತ್ತಾನೋ (ಸ) ಆ (ಸುಮಂತುನಾಮಾ) ಉತ್ತಮ ಮನನ ಶೀಲನೆಂಬ ಹೆಸರಿಗೆ ಅರ್ಹನಾದ (ಇಂದ್ರಃ) ಇಂದ್ರಿಯವಾನ್ ಜೀವನು, (ಪುರಾಂ) ದೇಹ ಮತ್ತು ಬುದ್ಧಿಯ (ಚ್ಯೌತ್ನಾಯ) ಶಕ್ತಿ ಮತ್ತು ವ್ಯವಸ್ಥೆಗೆ, (ನೂಚಿತ್) ನಿಶ್ಚಯವಾಗಿ (ಶಯಥಾಯ) ಸುಖ ವಿಶ್ರಾಂತಿಗೆ (ಭೂತ್) ಅರ್ಹನಾಗುತ್ತಾನೆ.

ಈ ಮಂತ್ರದ ಕಡೆ ವಿವೇಚನಾತ್ಮಕವಾದ ದೃಷ್ಟಿಯಿಂದ ನೋಡಿರಿ. ಇಂದ್ರನು ಇಂದ್ರಿಯವಾನ್ ಜೀವನೆಂಬುದನ್ನು ನೀವು ಈ ಮೊದಲೇ ಅರಿತಿದ್ದೀರಿ. ಅರಿಷಡ್ವರ್ಗವನ್ನು ಗೆಲ್ಲುವ ಜೀವಾತ್ಮನೇ 'ಸುಮಂತು'–ಉತ್ತಮ ಮನನಶೀಲ ಎಂಬ ಹೆಸರಿಗೆ ಅರ್ಹನಾಗುತ್ತಾನೆ. 'ಮನನಶೀಲ' - ಎಂದರೆ ಮನುಷ್ಯ! ಉತ್ತಮ ಮನುಷ್ಯನೆಂದರೇನು? ಆದರ್ಶಮಾನವನೆಂದರೇನು? ಎರಡೂ ಒಂದೇ. ನಾವು ಈ ಪುಸ್ತಕಕ್ಕೆ ಹೀಗೇಕೆ ಹೆಸರಿತ್ತೆವೆಂಬುದು ಈಗ ಪಾಠಕರ ಗಮನಕ್ಕೆ ಬಂದಿರಬಹುದು. ಈ ಮಂತ್ರದಲ್ಲಿ, ಕಾಮ-ಕ್ರೋಧಾದಿ ರಾಕ್ಷಸೀವೃತ್ತಿಗಳನ್ನು ನಾಶಮಾಡುವುದರ ಜೊತೆಗೆ, ಆದರ್ಶಮಾನವನಿಗೆ ಇರಬೇಕಾದ ಮತ್ತೊಂದು ಲಕ್ಷಣ ವರ್ಣಿತವಾಗಿದೆ. ಅವನು 'ಮಿಥೂಜನ' ನಾಗಿರಬಾರದು. 'ಮಿಥೂಜನ' ಎಂದರೇನು? 'ಮಿಥ್ಯಾದೀ ಪುರುಷ' – ಸುಳ್ಳಾಡುವ ಮನುಷ್ಯ. ಇನ್ನೂ ಒಂದು ಅರ್ಥ – 'ಜೋಡೀಮನುಷ್ಯ'- ಎಂದು. ಯಾವನ ಜೀವನ, ಆನೆಯ ಹಲ್ಲು ಅಗಿಯುವುದಕ್ಕೊಂದು ತೋರಿಸುವುದಕ್ಕೊಂದು ಇರುವಂತೆ ತನಗೊಂದು, ಬೇರೆಯವರಿಗೆ ತೋರಿಸಿಕೊಳ್ಳುವುದಕ್ಕೊಂದು ಇರುತ್ತದೋ, 'ಒಳಗೊಂದು ಹೊರಗೊಂದು' ಆಗಿರುತ್ತದೋ, ಆ ಮನುಷ್ಯ, 'ಜೋಡೀಮನುಷ್ಯ' – 'ಮಿಥೂಜನ', (A man of Dual Personality.) ಎರಡರ್ಥವನ್ನೂ ಆಲೋಚಿಸಿ ನೋಡಿದರೆ–ಹೊರಡುವುದೊಂದೇ ತತ್ತ್ವ; 'ಕಪಟಿಯಾದವನು'–ಎಂದೇ.

ಸುಳ್ಳು ಹೇಳುವುದು, ತನ್ನ ನಿಜವಾದ ಬಣ್ಣವನ್ನು ಬಚ್ಚಿಟ್ಟು ಬೇರೊಂದು ರೂಪದಲ್ಲಿ ತನ್ನನ್ನು ತೋರಿಸಿಕೊಳ್ಳುವುದು. ಕಪಟವನ್ನು ಮಾಡುವುದು ಇದೆಲ್ಲಾ ಯಾವಾಗ? ಮೋಹ, ಕ್ರೋಧ, ಈರ್ಷ್ಯೆ, ಕಾಮ, ಗರ್ವ ಮತ್ತು ಲೋಭ – ಈ ಆರು ರಾಕ್ಷಸೀವೃತ್ತಿಗಳು ಜೀವನಕ್ಕಿಳಿದಾಗಲೇ ಅಲ್ಲವೇ? ಜ್ಞಾನ, ಶಾಂತಿ, ಔದಾರ್ಯ, ಸಂಯಮ, ವಿನಯ ಮತ್ತು ತ್ಯಾಗ – ಈ ಆರು ದೈವೀವೃತ್ತಿಗಳು ಬಾಳಿಗಿಳಿದ ಮೇಲೆ, ನಿರ್ಮೋಹನಾದ, ಪ್ರಶಾಂತನಾದ, ಉದಾರನಾದ, ಜಿತೇಂದ್ರಿಯನಾದ, ನಮ್ರನಾದ ನಿರ್ಲೋಭನಾದ ಮಾನವನು ಯಾರೊಂದಿಗಾದರೂ ಸುಳ್ಳನ್ನಾಡುವ, ಆಡಂಬರ ತೋರಿಸಿಕೊಳ್ಳುವ ಕಪಟನಾಟಕವಾಡುವ ಪ್ರಸಂಗವಾದರೂ ಎಲ್ಲಿದೆ?

ಇದೇ ಮಂತ್ರ – 'ಸುಮಂತು'ವಿಗೆ, 'ಉತ್ತಮಮನನಶೀಲ'ನಿಗೆ, ಆದರ್ಶ ಮಾನವನಿಗೆ, ಜೀವನವಲ್ಲಿ ಲಭಿಸುವ ಎರಡು ಅಲಭ್ಯ ಫಲಗಳನ್ನು ವರ್ಣಿಸಿದೆ. ಒಂದು 'ಪುರಾಂಚ್ಯಾತ್ನ'; ಶುದ್ಧವೈದಿಕಶಬ್ದವಿದು, 'ಪೂಃ' ಶಬ್ದಕ್ಕೆ ನಗರ, ದುರ್ಗ, ಶರೀರ ಮತ್ತು ಬುದ್ಧಿ-ಎಂಬರ್ಥಗಳಿವೆ. 'ಚ್ಯಾತ್ನ' ಎಂದರೆ ಕದಲಿಸುವಿಕೆ, ಬಲ ಮತ್ತು ವ್ಯವಸ್ಥೆ. ಈ ಮಂತ್ರ ಆಧ್ಯಾತ್ಮಿಕವಾದ ಕಾರಣ, ನಮಗೀಗ ನಗರ, ದುರ್ಗ, ಕದಲಿಸುವಿಕೆ – ಈ ಅರ್ಥಗಳು ಆವಶ್ಯಕವಾಗಿಲ್ಲ. ಉಳಿದ ಶರೀರ ಮತ್ತು ಬುದ್ಧಿ, ಬಲ ಮತ್ತು ವ್ಯವಸ್ಥೆ ಈ ಅರ್ಥಗಳ ಸಂಯೋಜನದಿಂದ **"ಶಾರೀರಿಕ ಬಲ"** ಮತ್ತು **"ಭೌದ್ಧಿಕ ವ್ಯವಸ್ಥೆ"** – ಎಂಬ ಸೊಗಸಾದ ತಾತ್ಪರ್ಯ ಹೊರಡುತ್ತದೆ. ಎಂದರೆ – **ಮೇಲೆ ಹೇಳಿದ ಆರು ರಾಕ್ಷಸೀವೃತ್ತಿಗಳನ್ನು ಬಲಿಹಾಕಿದ ಆದರ್ಶ ಮಾನವನ ದೇಹ ಬಲಿಷ್ಠವಾಗುತ್ತದೆ; ಬುದ್ಧಿ ವ್ಯವಸ್ಥಿತವಾಗುತ್ತದೆ.** ಅಲ್ಲವೇ? ಮೋಹಿಯಾದವನು ಅನರ್ಥಕ್ಕೆ ಸಿಕ್ಕಿ, ಕ್ರೋಧಿಯಾದವನು ಹೃದಯಕ್ಕೆ ಧಕ್ಕೆ ತಂದುಕೊಂಡು ಮತ್ತು ರಕ್ತವನ್ನೊಣಗಿಸಿಕೊಂಡು, ಹೊಟ್ಟೆಯ ಕಿಚ್ಚಿನವನು ಉರಿದುಬಿದ್ದು, ಕಾಮಿಯಾದವನು ವೀರ್ಯನಾಶ ಮಾಡಿಕೊಂಡು ಅಹಂಕಾರಿಯಾದವನು ಅನಾಚಾರಕ್ಕೆ ಬಿದ್ದು, ಲೋಭಿಯಾದವನು ಚಿಂತಿಸಿ ಚಿಂತಿಸಿ, ತಮ್ಮ ತಮ್ಮ ಶರೀರಗಳನ್ನು ನಾಶಮಾಡಿಕೊಳ್ಳುತ್ತಾರೆ. ಸದಾ ಯಾವುದಾದರೊಂದು ಕಹಿಯಾದ ಚಿಂತೆಗೆ ಸಿಕ್ಕಿಯೇ

ಇರುವುದರಿಂದ, ಅವರ ಬುದ್ಧಿಗಳು ಎತ್ತೆತ್ತಲೋ ತಪ್ಪು ತಪ್ಪಾಗಿ ಹರಿಯುತ್ತಾ ಇರುತ್ತವೆ; ಅವುಗಳಲ್ಲಿ ಒಂದು ವ್ಯವಸ್ಥೆಯೇ ಇರುವುದಿಲ್ಲ. ಇಂತಹ ಜಳ್ಳು ಶರೀರದ ಒಡಕಲು ಬುದ್ಧಿಯ ಕ್ಷುದ್ರಜೀವಿಗಳು ಪರಲೋಕದ ಮಾತಂತಿರಲಿ; ಇಹಲೋಕದಲ್ಲಿಯಾದರೂ ಸುಖವಾಗಿ ಬಾಳಬಲ್ಲರೇ ? ಬಂಗಲೆಗಳಿರಬಹುದು; ಕಾರುಗಳೂ ಇರಬಹುದು; ಬ್ಯಾಂಕಿನಲ್ಲಿ ಭಾರೀ ಮೊತ್ತವೂ ಇರಬಹುದು; ಆದರೆ ಜರ್ಜರೀಭೂತವಾದ ದೇಹವನ್ನೂ, ದಾರ ಹರಿದ ಪಟದಂತೆ ತೂರಾಡುವ ಬುದ್ಧಿಯನ್ನೂ ಹೊತ್ತು ಯಾವನು ತಾನೇ ಹದವಾದ ಬಾಳನ್ನು ಬಾಳಬಲ್ಲನು? ಆದುದರಿಂದ-ರಾಕ್ಷಸೀವೃತ್ತಿಗಳನ್ನು ಸದೆ ಬಡಿಯಿರಿ, ದೈವೀವೃತ್ತಿಗಳನ್ನು ರೂಢಿಸಿಕೊಳ್ಳಿರಿ. ಜ್ಞಾನದ ಜ್ಯೋತಿಯಿಂದ ಪ್ರಕಾಶಿಸುವವರಾಗಿ, ಶಾಂತಿಯ ಶೀತಳ ಛಾಯೆಯನ್ನು ಎರೆಯುವವರಾಗಿ, ಔದಾರ್ಯದ ಸರಸಸ್ನೇಹದಿಂದ ರಂಜಿಸುವವರಾಗಿ, ಸಂಯಮದ ಸ್ವರ್ಣ ಪ್ರತಿಮೆಗಳಂತೆ ಬೆಳಗುವವರಾಗಿ ವಿನಯದ ಒಲವಿನಿಂದ ಗೆಲುವವರಾಗಿ, ತ್ಯಾಗದ ಭೂಷಣದಿಂದ ಅಲಂಕೃತರಾಗಿ – ಗಟ್ಟಿಮುಟ್ಟಾದ ದೇಹಗಳನ್ನೂ ಕಟ್ಟುನಿಟ್ಟಾದ ಬುದ್ಧಿಗಳನ್ನೂ ಹೊತ್ತು, ಮರ್ತ್ಯಲೋಕದ ದೇವಜನರಂತೆ ನಗುನಗುತ್ತಾ ಬಾಳಿರಿ.

ಈಗ ಇನ್ನೊಂದು ಫಲ-'ಶಯಥ'-ಎಂಬುದು. ಶಯಥ ಎಂದರೆ ಸುಖ ನಿದ್ರೆ. ಸುಖನಿದ್ರೆ ಯಾರಿಗೆ ಬೇಡ? ಆದರೆ-ಮೋಹಿಯಾದವನು ನಿಶ್ಚಿಂತನಾಗಿ ಮಲಗಬಲ್ಲನೇ? ಕ್ರೋಧಿಯಾದವನು ಶಾಂತಿಯಿಂದ ಹಾಸಿನಲ್ಲೊರಗಬಲ್ಲನೆ? ಹೊಟ್ಟೆಯ ಕಿಚ್ಚಿನವನು ನಗುನಗುತ್ತಾ ಹಾಸಿಗೆಯನ್ನೇರಬಲ್ಲನೇ? ಕಾಮಾರ್ತನ ಗೋಳಂತೂ ನೂರಕ್ಕೆ ತೊಂಬತ್ತು ಜನ ವಿವಾಹಿತರಿಗೆ ಗೊತ್ತು; ವ್ಯಭಿಚಾರಿಗಳ ಮಾತನ್ನೆತ್ತದಿದ್ದರೇ ಕ್ಷೇಮ. ಜಂಬಗಾರ ಸುಖವಾಗಿ ಮಲಗಲಾರ. ಲೋಭಿಗಂತೂ ಎಲ್ಲ ಬಾಗಿಲು–ಕಿಟಿಕಿಗಳನ್ನೂ ಮುಚ್ಚಿದ್ದರೂ ಸಹ ಮೇಜು–ಕುರ್ಚಿ–ಮಂಚಗಳ ಕೆಳಗೇ ಕಳ್ಳ ಕಾಣಿಸುತ್ತಿರುತ್ತಾನೆ. ಅದೇ ನಿರ್ಮೋಹನಾದ ಸಂನ್ಯಾಸಿಯನ್ನು ನೋಡಿರಿ. ಪ್ರಶಾಂತನಾದ ಮಹಾತ್ಮನನ್ನು ನೋಡಿರಿ. ಈರ್ಷೆಯಿಲ್ಲದ ಹಸುಕಂದಗಳನ್ನು ನೋಡಿ. ಕಾಮವಾಸನೆಯ ಗಂಧವೇ ಇಲ್ಲದ ಬಾಲಕ–ಬಾಲಕಿಯರನ್ನು ನೋಡಿರಿ. ವಿನಯ

ಶೀಲರಾದ ವಿದ್ಯಾರ್ಥಿಗಳನ್ನು ನೋಡಿರಿ. ತ್ಯಾಗಮೂರ್ತಿಗಳಾದ ಸಾಧು ಜನರನ್ನು ನೋಡಿರಿ ಮಂಚವೇ ಬೇಕೆಂಬುದಿಲ್ಲ; ಚಾಪೆಯಿದ್ದರೆ ಅದೇ ಆಯಿತು. ಅದೂ ಸಿಕ್ಕದಿದ್ದರೆ—ಭೂಮಾತೆಯ ವಕ್ಷಃ ಸ್ಥಳವೇಸಾಕು. ಮಲಗಿದೊಡನೆಯೇ ಸುಖನಿದ್ರೆ ! ನಿದ್ರೆಬರಲು ಗುಳಿಗೆ ತಿನ್ನಬೇಕಾಗಿಲ್ಲ: ಮದಿರಾಪಾನದ ಆವಶ್ಯಕತೆಯೂ ಇಲ್ಲ. ಸುಖನಿದ್ರೆ ದೇವಜನರಿಗೆ ಲಭ್ಯ; ರಾಕ್ಷಸರೇ ರಾತ್ರಿಯ ಹೊತ್ತು ಎಚ್ಚರವಾಗಿ ಒದಾಡುತ್ತಿರುವುದು.

ಹೀಗೆ ದೃಢದೇಹ, ವ್ಯವಸ್ಥಿತಬುದ್ಧಿ, ಸುಖಮಯ ವಿಶ್ರಾಂತಿ - ಇವು ಮೂರೂ ಸಹಜವಾಗಿಯೇ ಲಭಿಸಿದ ಮೇಲೆ, ಮಾನವ ಸಾಧಿಸಲಾಗದ ಗುರಿಯಾದರೂ ಯಾವುದಿರುತ್ತದೆ? ಇಹಲೋಕದ ಸುಖ, ಪರಲೋಕದ ಆನಂದ- ಎಲ್ಲವೂ ಆದರ್ಶ ಮಾನವರ ಪಾಲಿಗೆ, ಸುಲಭವೇ ಆಗುವುದು. ಇಂತಹವರಿಂದ, ಪರಿವಾರ, ಸಮಾಜ, ರಾಷ್ಟ್ರ ವಿಶ್ವ–ಎಲ್ಲವೂ ಸ್ವರ್ಗದ ರೂಪವನ್ನೇ ತಾಳುವುವು; ನರಕ ಕೇವಲ ಒಂದು ಶಬ್ದವಾಗಿಯೇ ಉಳಿದುಹೋಗುವುದು. ಆದುದರಿಂದ, ಬನ್ನಿರಿ, ಬಾಂಧವರೇ! ಈ ಕೆಳಗಿನ ಮಂತ್ರವನ್ನು ಬಾಳಿನ ಕೈಗಡಿಯನ್ನಾಗಿ ಮಾಡಿಕೊಳ್ಳೋಣ :—

**ತೀಕ್ಷ್ಣೇನಾಗ್ನೇ ಚಕ್ಷುಷಾ ರಕ್ಷ ಯಜ್ಞಂ ಪ್ರಾಚಂ ವಸುಭ್ಯಃ ಪ್ರಣಯ ಪ್ರಚೇತಃ । ಹಿಂಸ್ರಃ ರಕ್ಷಾಂಸ್ಯಭಿ ಶೋಶುಚಾನಂ ಮಾ ತ್ವಾ ದಭನ್ ಯಾತುಧಾನಾ ನೃಚಕ್ಷಃ ॥**

[ಋಗ್ವೇದ :– ೧೦-೮೭-೯]

(ಅಗ್ನೇ) ದೇಹದ ಸಂಚಾಲಕನಾದ ಜೀವನೇ! (ಪ್ರಚೇತಃ) ಉತ್ತಮ ಚಿತ್ತವುಳ್ಳವನೇ! (ನೃಚಕ್ಷಃ) ಮಾನವೀಯ ದೃಷ್ಟಿಯುಳ್ಳವನೇ! (ತೀಕ್ಷ್ಣೇನ) ತೀಕ್ಷ್ಣವಾದ, (ಚಕ್ಷುಷಾ) ದೃಷ್ಟಿಯಿಂದ, (ಯಜ್ಞಂ) ಯಜ್ಞವನ್ನು ಶುಭ ಕರ್ಮವನ್ನು (ರಕ್ಷ) ರಕ್ಷಿಸು (ವಸುಭ್ಯಃ) ಪೃಥ್ವೀನಿವಾಸಿಗಳಾದ ಜೀವರ ಸಲುವಾಗಿ (ಪ್ರ) ಉತ್ಕೃಷ್ಟ ರೀತಿಯಲ್ಲಿ [ಶುಭಕರ್ಮವನ್ನು] (ಪ್ರಾಚಂ) ಮುಂದಕ್ಕೆ (ನಯ) ಕೊಂಡೊಯ್ಯು. (ರಕ್ಷಾಂಸಿ ಅಭಿ) ರಾಕ್ಷಸೀ ವೃತ್ತಿಗಳಿಗೆ ಅಭಿಮುಖನಾಗಿ, (ಹಿಂಸ್ರಂ) ಘೋರನಾಗಿ (ಶೋಶುಚಾನಂ) ಪ್ರಕಾಶಿಸುವ

[ತ್ವಾ] ನಿನ್ನನ್ನು, [ಯಾತುಧಾನಾಃ] ದಾರಿಗಳ್ಳರಾದ, 'ಯಾತುಧಾನಃ' 'ಹೋಗಲಿ ಆತ್ಮ' ಎಂದು ಹೇಳುವ ಭೋಗಾಭಿಲಾಷೆಯ ಭಾವನೆಗಳು, [ಮಾ ದಭನ್] ಅದುಮದಿರಲಿ!

ಅಹುದು. ರಾಕ್ಷಸೀ ವೃತ್ತಿಗಳನ್ನು ನಾಶಪಡಿಸಬೇಕೆಂದು ಮಾನವನು ಕಠೋರವಾದ ಸಾಧನೆಯುನ್ನು ಮಾಡುವಾಗ "ಎಲ್ಲಿಯ ಆತ್ಮ? ಏತರ ಸಾಧನೆ? ಇರುವ ನಾಲ್ಕು ದಿನ, ತಿಂದುಂಡು ಸುಖಪಟ್ಟು, ಹೊರಟು ಹೋಗಬಾರದೇ? ಮುಂದೇನಾಗುವುದೋ ಕಂಡವರಾರು? ಹೋಗಲಿ ಈ ಆತ್ಮ! ಸುಖೋಪಭೋಗ ಮಾಡು"—ಎಂದು ಹೇಳುವ, ಭೌತಿಕಭೋಗ ವಿಲಾಸದ ಭಾವನೆಗಳು, ಅಲೆ-ಅಲೆಯಾಗಿ ಚಿತ್ತದಲ್ಲೆದ್ದು ಅದನ್ನು ಕದಡು ವುದು ಸಹಜ. 'ಧಾನ'—ಎಂದರೆ ಧಾರಕ, ಧರಿಸುವವನು; ದೇಹವನ್ನು ಧರಿಸುವವನಾದ ಕಾರಣ, ಜೀವಾತ್ಮನನ್ನು 'ಧಾನ'—ಎಂದಿದೆ ವೇದ, 'ಯಾತು' ಎಂದರೆ, 'ಹೋಗಲಿ' ಎಂದರ್ಥ. ಹೀಗೆ 'ಯಾತುಧಾನ'—ಎಂದರೆ—'ಆತ್ಮ ಹೋಗಲಿ. ದೇಹಸುಖ ಸಿಕ್ಕಿದರೆ ಸಾಕು'-ಎಂಬ ಭಾವನೆ ಯನ್ನೇ ವೇದ 'ಯಾತುಧಾನ' ಎಂದು ಕರೆದಿದೆ, ಈ ಭೌತಿಕ ಸುಖದ ಅಭಿಲಾಷೆಯೇ ರಾಕ್ಷಸೀವೃತ್ತಿಗಳ ಸಹಚಾರೀತತ್ತ್ವ, ಆದುದರಿಂದ, ಮೋಹ, ಕ್ರೋಧ ಮೊದಲಾದ ರಾಕ್ಷಸೀವೃತ್ತಿಗಳನ್ನು ಬಲಿಹಾಕಲು ಮಾನವನು ಕಷ್ಟಪಡುವಾಗ, ಭೋಗ ವಿಲಾಸದ ಭಾವನೆ ತಲೆಯೆತ್ತಿ, ಅವನ ಸಾಧನೆಗೆ ಭಂಗ ತರುತ್ತದೆ. ವೇದ, "ಈ ರಾಕ್ಷಸೀವೃತ್ತಿಗಳ ಸಹಚಾರಿಯಾದ ಭೋಗ ವಿಲಾಸದ ಭಾವನೆಗೆ ನೀನು ತಲೆ ಬಾಗಬೇಡ. ನೀನು ದೇಹದ ಸಂಚಾಲಕ-ಎಂಬುದನ್ನು ನೆನಪಿಡು. ಉತ್ತಮ ಚಿತ್ತವುಳ್ಳವನಾಗಿರು. ಮಾನವೀಯ ದೃಷ್ಟಿಯನ್ನು ರೂಢಿಸಿಕೋ, ಆಲಸ್ಯ-ಪ್ರಮಾದಗಳಿಗೆ ಸಿಕ್ಕದೆ, ಕಠೋರ ಸಾಧನೆಯ ಮೂಲಕ-ರಾಕ್ಷಸೀವೃತ್ತಿಗಳನ್ನು ಹೊಸಕಿಹಾಕು" – ಎಂದು ಆದೇಶ ನೀಡುತ್ತಿದೆ.

ಪ್ರಿಯಪಾಠಕರೇ! ಈ ವೇದಾದೇಶ ಸದಾ ನಿಮ್ಮ ಮಾನಸ ಚಕ್ಷು ಗಳ ಮುಂದಿರಲಿ. ಸಾಧನಾಮಾರ್ಗ ಕಠೋರ ಮಾರ್ಗ, ಭೋಗವಿಲಾಸದ ಮಾರ್ಗ ಸದಾ ಸುಲಭವೇ, ಆದರೆ-ಸುಲಭವಾದುದೇ ಒಳ್ಳೆಯದೆಂಬ

ಹಗುರವಾದ ತೀರ್ರ್ಮಾನ ಬುದ್ಧಿವಂತಿಕೆಯು–ಮನನಶೀಲತೆಯು–ಮಾನವತ್ವ-ದ ಲಕ್ಷಣವೇ ಅಲ್ಲ. ಮೇಲೇರುವ ಮಾರ್ಗ ದೇವಮಾರ್ಗ; ಕೆಳಗೆ ಬೀಳುವ ಮಾರ್ಗ ರಾಕ್ಷಸ ಮಾರ್ಗ. ಕೆಳಗೆ ಬೀಳುವುದು ಸುಲಭವೆಂದು ರಾಕ್ಷಸ ಮಾರ್ಗವನ್ನು ನಾವಾರೂ ತುಳಿಯದಿರೋಣ. **"ಉದ್ಯಾನಂ ತೇ ಪುರುಷ ನಾವಯಾನಂ"** [ಅಥರ್ವ : ೮.೧.೬] "ಹೇ ಮಾನವ! ನಿನ್ನ ದಾರಿ ಮೇಲೆ ಹೋಗುವಂತಹುದು; ಕೆಳಗೆ ಹೋಗುವುದಲ್ಲ!" ಆದುದರಿಂದ ಮಾನವತ್ವ ಪ್ರೇಮಿಗಳೇ ! ರಾಕ್ಷಸೀವೃತ್ತಿಗಳನ್ನು ನಾಶಮಾಡಿ, ದೈವೀ ವೃತ್ತಿಗಳನ್ನು ಎಚ್ಚರಿಸಿರಿ. !

## ೧೨

# ಷಡ್ರಿಪು ವಿಜಯೀ ಆದರ್ಶಮಾನವರು

ವ್ಯಕ್ತಿಗಳಿಂದ ಪರಿವಾರ; ಪರಿವಾರಗಳಿಂದ ಸಮಾಜ; ಸಮಾಜ ಗಳಿಂದ ರಾಷ್ಟ್ರ; ರಾಷ್ಟ್ರಗಳಿಂದ ವಿಶ್ವ. ಹೀಗೆ ವಿಶ್ವವೆಂಬ ದಿವ್ಯಭವನದ ಅಡಿಗಲ್ಲು, ಎಲ್ಲಕ್ಕಿಂತ ಕೆಳಗಿನಸ್ತರ–ವ್ಯಕ್ತಿ. ವ್ಯಕ್ತಿ ದೃಢನಾದರೆ, ಬಲಿಷ್ಠ ನಾದರೆ, ಸೌಜನ್ಯಪೂರಿತನಾದರೆ, ವಿಶ್ವ-ಶಾಂತಿಗೆ ದೃಢವಾದ ತಳಪಾಯ ಹಾಕಿದಂತಾಗುತ್ತದೆ. ವ್ಯಕ್ತಿ–ವಿಕಾಸದಿಂದ ಸರ್ವವಿಕಾಸ; ವ್ಯಕ್ತಿಯ ಹ್ರಾಸ ದಿಂದ ಸರ್ವಹ್ರಾಸ. ಅದೇ ಕಾರಣದಿಂದ, ವೇದಗಳು. ಮಾನವನಿಗೆ ವ್ಯಕ್ತಿ ಗತ ಚಾರಿತ್ರ ನಿರ್ಮಾಣದ ಆದೇಶವನ್ನು, ಈ ರೀತಿ ಕೊಡುತ್ತವೆ:–

**ಪರಿಮಾಗ್ನೇ ದುಶ್ಚರಿತಾದ್ಬಾಧಸ್ವಾಮಾ ಸುಚರಿತೇ ಭಜ ।**
**ಉದಾಯುಷಾ ಸ್ವಾಯುಷೋದಸ್ಥಾಮನ್ಯೃತಾನ್ ಅನು ॥**

[ಯುಜು :– ೪.೨೮]

[ಅಗ್ನೇ] ತೇಜಸ್ವೀದೇವ! [ಮಾ] ನನ್ನನ್ನು, [ದುಶ್ಚರಿತಾತ್] ದುರ್ನಡೆ ಯಿಂದ, [ಪರಿಬಾದಸ್ವ] ಎಲ್ಲೆಡೆಯಿಂದಲೂ ತಡೆ. [ಮಾ] ನನ್ನನ್ನು [ಆ] ಎಲ್ಲೆಡೆಯಿಂದಲೂ, [ಸುಚರಿತೇ] ಒಳ್ಳೆಯ ನಡತೆಯಲ್ಲಿ, [ಭಜ] ದೃಢ

ಗೊಳಿಸು. [ಉತ್ ಆಯುಷಾ] ಉನ್ನತವಾದ ಜೀವನದಿಂದ; [ಸ್ವ ಆಯುಷಾ] ತನ್ನ ಸ್ವಂತ ಜೀವನದಿಂದ, [ಅಮೃತಾನ್ ಅನು] ಅಮರರಾದ ಮಹಾ ಮಾನವರನ್ನನುಸರಿಸಿ, [ಉತ್ ಅಸ್ಥಾಂ] ಉನ್ನತನಾಗಿ ಹೋಗುವೆ!" **ವೈದಿಕ-ಪ್ರಾರ್ಥನೆಗಳು ದೇವರನ್ನು ಮೆಚ್ಚಿಸುವುದಕ್ಕಾಗಿ, ಅವನಿಗೆ ಲಂಚದ ಆಸೆತೋರಿಸುವುದಕ್ಕಾಗಿ ಮಾಡುವ ಬಾಹ್ಯಕ್ರಿಯೆಗಳಲ್ಲ; ತನ್ನ ಆತ್ಮನ ಹಂಬಲವನ್ನು ಸಂಕಲ್ಪ ಪೂರ್ವಕವಾಗಿ ಪರಮಾತ್ಮನಲ್ಲಿ ಅರಿಕೆಮಾಡಿಕೊಳ್ಳುವ ಆಧ್ಯಾತ್ಮಿಕ ಸಾಧನೆಗಳು** – ಎಂಬ ದೃಢ ಸತ್ಯವನ್ನು ಚಿತ್ರದಲ್ಲಿ ನಿಲ್ಲಿಸಿಕೊಂಡು ಈ ಭವ್ಯ ಪ್ರಾರ್ಥನೆಯತ್ತ ನೋಡಿರಿ. ಶ್ರೀರಾಮ ಹಾಗಿದ್ದ; ಶ್ರೀ ಕೃಷ್ಣ ಹೀಗಿದ್ದ, ಸ್ವಾಮೀ ದಯಾನಂದರು ಅಂತಹವರು; ಮಹಾತ್ಮಾ ಗಾಂಧೀ ಇಂತಹವರು – ಎಂದು ಉದ್ದುದ್ದ ಭಾಷಣಗಳನ್ನು ಮಾಡುವುದರಿಂದಲ್ಲ; ತನ್ನ ಸ್ವಂತ ಜೀವನದಲ್ಲಿ ಆ ಮಹಾ ಪುರುಷರ ಉಪದೇಶಗಳಿಗೆ ಕ್ರಿಯಾತ್ಮಕ ರೂಪಕೊಟ್ಟು, ದುಶ್ಚರಿತ್ರ-ನಾಶ ಹಾಗೂ ಸಚ್ಚರಿತ್ರವಿಕಾಸ ಮಾಡಿಕೊಂಡು ಮೇಲೇರಬೇಕು-ಎಂಬ ದಿವ್ಯಾದೇಶ ಎಷ್ಟು ಸ್ಪಷ್ಟವಾಗಿದೆ!

ಸರ್ವ–ವಿಕಾಸದ ಅಡಿಗಲ್ಲಾದ ವ್ಯಕ್ತಿ–ವಿಕಾಸವನ್ನು ಕದಲಿಸುವ, ಸಡಿಲಿಸುವ ಎಲ್ಲ ದುರ್ನಡೆಗಳಿಗೂ ಮೋಹ, ಕ್ರೋಧ, ಈರ್ಷ್ಯೆ, ಕಾಮ, ಗರ್ವ ಮತ್ತು ಲೋಭ–ಎಂಬ ಆರು ರಾಕ್ಷಸೀವೃತಿಗಳೇ ಕಾರಣ–ಎಂಬುದನ್ನು ಓದಿದ್ದೀರಲ್ಲವೇ? ಬನ್ನಿರಿ, ಈಗ ಈ ಆರು ರಾಕ್ಷಸೀ ವೃತ್ತಿಗಳನ್ನೂ, ಜಯಿಸಿ ನಿಂತ ಆದರ್ಶಮಾನವರ ಭವ್ಯಚಿತ್ರಗಳನ್ನು, ಯಾವ ಟೀಕೆ–ಟಿಪ್ಪಣಿಯೂ ಇಲ್ಲದೆ, ವೇದಗಳ ಶಬ್ದಗಳಲ್ಲೇ ನೋಡೋಣ:—

## ೧. ಮೋಹವಿಜಯೀ ಆದರ್ಶ ಮಾನವರು

**ಪ್ರಯೇ ಧಾಮಾನಿ ಪೂರ್ವ್ಯಾಣ್ಯರ್ಚಾನ್ ವಿಯದುಚ್ಛಾನ್ವಿ
ಯೋತಾರೋ ಅಮೂರಾಃ। ವಿಧಾತರೋ ವಿ ತೇ ದಧುರಜಸ್ರಾ
ಋತಧೀತ ಯೋ ರುರುಚಂತ ದಸ್ಮಾಃ॥** [ಋಗ್ವೇದ೪-೫೫-೨]

[ಯೇ] ಯಾರು [ಅಮೂರಾಃ] ಮೋಹವನ್ನು ಜಯಿಸಿರುತ್ತಾರೋ. [ತೇ] ಅವರು, [ಪೂರ್ವ್ಯಾಣಿ] ಶ್ರೇಷ್ಠವಾದ [ಧಾಮಾನಿ] ಲೋಕಗಳನ್ನು, ಸ್ಥಿತಿಗಳನ್ನು. [ಪ್ರಆರ್ಚನ್] ಉತ್ತಮ ರೀತಿಯಿಂದ ಸೇವಿಸುತ್ತಾರೆ. [ಯತ್] ಅವನ್ನು. [ವಿ] ನಾನಾ ರೀತಿಯಿಂದ. [ಉಚ್ಛ್ಯಾನ್] ಪ್ರಕಟಗೊಳಿಸುತ್ತಾರೆ - ಬೇರೆಯವರಿಗೂ ತೋರಿಸಿಕೊಡುತ್ತಾರೆ. [ವಿಯೋತಾರಃ] ಅಜ್ಞಾನವನ್ನು ಖಂಡಿಸುವವರೂ, [ವಿಧಾತಾರಃ] ನಾನಾಬಗೆಯಿಂದ ಜನರನ್ನುದ್ಧರಿಸುವವರೂ, [ಅಜಸ್ರಾಃ] ಅಹಿಂಸಕರೂ ಆಗಿ, [ವಿದಧುಃ] ಜೀವನಗಳನ್ನು ವಿಶೇಷ ರೀತಿಯಿಂದ ಸಾಗಿಸುತ್ತಾರೆ. [ಋತಧೀತಯಃ] ಸತ್ಯಜ್ಞಾನವನ್ನೇ ಶಕ್ತಿಯನ್ನಾಗಿ ಉಳ್ಳವರೂ, [ದಸ್ಮಾಃ] ಸಂಯಮಿಗಳೂ ಆಗಿ [ರುರುಚಂತ] ಎಲ್ಲರಿಗೂ ಪ್ರಿಯರಾಗಿ ಪ್ರಕಾಶಿಸುತ್ತಾರೆ.

## ೨. ಕ್ರೋಧವಿಜಯೀ ಆದರ್ಶಮಾನವರು

**ಇಂದ್ರಸ್ಯ ಸಖ್ಯ ಮೃಭವಃ ಸಮಾನಶುಃ ಮನೋರ್ನಪಾತೋ ಅಪಸೋ ದಧನ್ವಿರೇ । ಸೌಧನ್ವನಾಸೋ ಅಮೃತತ್ವಮೇರಿರೇ ವಿಷ್ಟ್ವೀ ಶಮೀಭಿಃ ಸುಕೃತಃ ಸುಕೃತ್ಯಯಾ ॥** [ಋ.೩-೬೦-೩]

(ಶಮೀಭಿಃ) ಪ್ರಶಾಂತ ಮನೋಭಾವನೆಗಳಿಂದ (ವಿಷ್ಟ್ವೀ) ಕಾರ್ಯಕ್ಷೇತ್ರವನ್ನು ಪ್ರವೇಶಿಸಿ, (ಸೌಧನ್ವನಾಸಃ) ಉತ್ತಮ ಭೂಪುತ್ರರಾದ (ಋಭವಃ) ಸತ್ಯಸಾಧಕರು (ಸುಕೃತ್ಯಯಾ) ಉತ್ತಮಕೃತಿಯಿಂದ (ಸುಕೃತಃ) ಪುಣ್ಯಶಾಲಿಗಳಾಗಿ, (ಇಂದ್ರಸ್ಯ) ಸರ್ವೇಶ್ವರನಾದ ಪರಮಾತ್ಮನ ಹಾಗೂ ಇಂದ್ರಿಯವಂತನಾದ ಜೀವಾತ್ಮನ (ಸಖ್ಯಂ) ಸ್ನೇಹವನ್ನು (ಸಂ ಆನಶುಃ) ಚೆನ್ನಾಗಿ ಅನುಭವಿಸುತ್ತಾರೆ. (ಮನೋಃ) ಮನನಶೀಲನಾದ ಮಾನವನನ್ನು, ಮನನಸಾಧನವಾದ ಮನಸ್ಸನ್ನು (ನ ಪಾತಃ) ಕೆಳಗೆ ಬೀಳಿಸದವರಾಗಿ,(ಅಪಸಃ) ಕರ್ಮಗಳನ್ನೂ, ಪ್ರಜೆಗಳನ್ನೂ (ದಧನ್ವಿರೇ) ಎತ್ತಿ ಹಿಡಿಯುತ್ತಾರೆ. ಈ ರೀತಿ, (ಅಮೃತತ್ವಂ) ಅಮರತ್ವವನ್ನು, ನಿತ್ಯಯಶಸ್ಸನ್ನು, ಮೋಕ್ಷವನ್ನು (ಏರಿರೇ) ಪಡೆಯುತ್ತಾರೆ.

## ೩. ಈರ್ಷ್ಯಾವಿಜಯೀ ಆದರ್ಶ ಮಾನವರು

**ವಾತತ್ವಿಷೋ ಮರುತೋ ವರ್ಷನಿರ್ಣಿಜೋ ಯಮಾ ಇವ ಸುಸದೃಶ: ಸುಪೇಶಃ । ಪಿಶಂಗಾಶ್ವಾ ಅರುಣಾಶ್ವಾ ಅರೇಪಸಃ ಪ್ರತ್ವಕ್ಷಸೋ ಮಹಿನಾ ದ್ಯೌರಿವೋರವಃ ॥** [ಋ.. :– ೫.೫೭.೪]

(ಮಹಿನಾ) ತಮ್ಮ ದೊಡ್ಡತನದಿಂದ (ದ್ಯೌಃ ಇವ) ವಿಶಾಲ ಆಕಾಶದಂತೆ (ಉರವಃ) ಉದಾರರಾದ ಈರ್ಷ್ಯಾ ವಿಜಯಿಗಳು (ವಾತತ್ವಿಷ:) ಪ್ರಾಣದಂತೆ ಕಾಂತಿದಾಯಕರೂ (ಮರುತಃ) ಮಿತದ್ರಾವಿಗಳು ಎಂದರೆ ಸಂಯಮದಿಂದಲೇ ವ್ಯವಹರಿಸುವವರೂ, (ವರ್ಷನಿರ್ಣರಜಃ) ಸುಖವರ್ಷಕನಾದ ಪರಮಾತ್ಮನ ಸಂಪರ್ಕದಿಂದ ನಿರ್ಮಲರೂ, (ಪಿಶಂಗಾಶ್ವಾಃ) ತೇಜೋಯುಕ್ತ ಇಂದ್ರಿಯಗಳನ್ನುಳ್ಳವರೂ. (ಅರುಣಾಶ್ವಾಃ) ಶುಭ್ರವಾದ ಪ್ರಕಾಶಮಯವಾದ ಆತ್ಮವನ್ನುಳ್ಳವರೂ, (ಅರೇಪಸಃ) ಪಾಪರಹಿತರೂ(ಪ್ರತ್ವಕ್ಷಸಃ) ಗೂಢತತ್ವಗಳನ್ನು, ಆಧ್ಯಾತ್ಮಿಕ ಜ್ಞಾನವನ್ನು ಬಹಿರಂಗ ಪಡಿಸುವವರೂ ಆಗಿ, (ಯಮಾಃ ಇವ) ಸಂಪೂರ್ಣ ನರ ಸಮಾಜವನ್ನೇ ನಿಯಂತ್ರಣದಲ್ಲಿಟ್ಟುಕೊಳ್ಳುವವರಂತೆ, (ಸುಸದೃಶಃ) ಉತ್ತಮದರ್ಶನೀಯರೂ (ಸುಸೇಶಸಃ) ಉತ್ತಮ ಶೋಭಾನ್ವಿತರೂ ಆಗಿರುತ್ತಾರೆ.

## ೪. ಕಾಮವಿಜಯೀ ಆದರ್ಶಮಾನವರು

**ತ ಉಕ್ಷಿತಾಸೋ ಮಹಿಮಾನಮಾಶತ ದಿವಿ ರುದ್ರಾಸೋ ಅಧಿ ಚಕ್ರಿರೇ ಸದಃ । ಅರ್ಚಂತೋ ಅರ್ಕಂ ಜನಯಂತ ಇಂದ್ರಿಯಂ ಅಧಿಶ್ರಿಯೋ ದಧಿರೇ ಪ್ರಶ್ನಿಮಾತರಃ ॥**

[ಋಗ್ವೇದ ೧, ೮೫, ೨]

(ತೇ) ಆ. (ಉಕ್ಷಿತಾಸಃ) ವೀರ್ಯವಂತರಾದ, (ರುದ್ರಾಃ) ಕಾಮ ರೋಗ ನಾಶಕರಾದ ಧೀರರು, (ಅರ್ಕಂ) ಅರ್ಚನೀಯನಾದ ಪರಮಾತ್ಮನನ್ನು (ಅರ್ಚಂತ) ಉಪಾಸಿಸುತ್ತಾ, (ಇಂದ್ರಿಯಂ) ಇಂದ್ರಿಯ ಶಕ್ತಿಯನ್ನು,

ಪಾಟವವನ್ನು, (ಜನಯಂತಃ) ಉತ್ಪನ್ನಗೊಳಿಸುತ್ತಾ, (ಮಹಿಮಾನಂ) ಮಹತ್ವವನ್ನು, (ಆಶತ) ಅನುಭವಿಸುತ್ತಾರೆ. (ದಿವಿ ಅಧಿ) ಪ್ರಕಾಶಮಯವಾದ ಸ್ಥಿತಿಯಲ್ಲಿ, (ಸದಃ ಚಕ್ರಿರೇ) ನೆಲೆಗೊಳ್ಳುತ್ತಾರೆ. (ಪೃಶ್ನಿ ಮಾತರಃ) ಭೂಮಾತೆಯ ಉತ್ತಮ ಪುತ್ರರೆನಿಸಿ, (ಅಧಿಶ್ರಿಯಃ) ಅದ್ಭುತ ಸಂಪತ್ತುಗಳನ್ನು, (ದಧಿರೇ) ಧರಿಸುತ್ತಾರೆ.

## ೫. ಗರ್ವವಿಜಯೀ ಆದರ್ಶಮಾನವರು

**ಮಹಾಂತೋ ಮಹ್ನಾ ವಿಭ್ವೋ ವಿಭೂತಯೋ ದೂರೇದೃಶೋ ಯೇ ದಿವ್ಯಾ ಇವಸ್ತೃಭಿಃ । ಮಂದ್ರಾಃ ಸುಜಿಹ್ವಾಃ ಸ್ವರಿತಾರ ಆಸಭಿಃ । ಸಮ್ಮಿಶ್ಲಾ ಇಂದ್ರೇ ಮರುತಃ ಪರಿಷ್ಟುಭಃ ॥**

[ಋಗ್ವೇದ ೧, ೧೬೬, ೧೧]

(ಯೇ) ಯಾರು, (ಸ್ತೃಭಿಃ) ತಮ್ಮ ಸದ್ಗುಣಗಳಿಂದ, (ದಿವ್ಯಾಃಇವ) ಆಕಾಶದಲ್ಲಿನ ನಕ್ಷತ್ರಗಳಂತೆ, (ದೂರೇದೃಶಃ) ದೂರಕ್ಕೂ ಕಾಣಿಸುವವರೂ, (ಮಹ್ನಾ) ತಮ್ಮ ಹಿರಿಮೆಯಿಂದ, (ಮಹಾಂತಃ) ದೊಡ್ಡವರೂ, (ವಿಭ್ವಃ) ಬಗೆಬಗೆಯಿಂದ ವಿಖ್ಯಾತರೂ, (ವಿಭೂತಯಃ) ವಿಶೇಷ ವೈಭವಶಾಲಿಗಳೂ, (ಮಂದ್ರಾಃ) ಸದಾ ಹರ್ಷಿತರೂ, (ಸುಜಿಹ್ವಾಃ) ಒಳ್ಳೆಯ ನಾಲಗೆಯುಳ್ಳವರು – ಎಂದರೆ ಸದಾ ಮೃದು-ಮಧುರ ಭಾಷಿಗಳೂ, (ಆಸಭಿಃ) ಮುಖಗಳಿಂದ, ಬಾಯಿಗಳಿಂದ, (ಸ್ವರಿತಾರಃ) ಸುಖವನ್ನು, ಶಾಂತಿಯನ್ನು ಸೂಸುವವರೂ, (ಇಂದ್ರೇ ಪರಮಾತ್ಮನಲ್ಲಿ ಮತ್ತು ಜೀವಾತ್ಮನಲ್ಲಿ, (ಸಂ ಮಿಶ್ಲಾಃ) ಪ್ರೇಮದಿಂದ ಬೆರೆಯುವವರೂ ಆಗಿರುತ್ತಾರೋ, (ಆ ಮರುತಃ) ನಿಗರ್ವಿಗಳಾದ ಸಂಯಮೀ ಮಾನವರು. (ಪರಿಷ್ಟುಭಃ) ಅತ್ಯಂತ ಪ್ರಶಂಸನೀಯರು

## ೬. ಲೋಭವಿಜಯೀ ಆದರ್ಶಮಾನವರು

**ಇಮೇ ಭೋಜಾ ಅಂಗಿರಸೋ ವಿರೂಪಾ ದಿವಸ್ಪುತ್ರಾಸೋ ಅಸುರಸ್ಯ ವೀರಾಃ । ವಿಶ್ವಾಮಿತ್ರಾಯ ದಧತೋ ಮಘಾನಿ ಸಹಸ್ರಸಾವೇ ಪ್ರತಿರಂತ ಆಯುಃ ॥** [ಋ. ೩, ೫೩, ೭]

[ಇಮೇ] ಈ, [ದಿವಃ ಪುತ್ರಾಸಃ] ಜ್ಯೋತಿಯ ಮಕ್ಕಳಾದ, ಬೆಳಕಿನ ಮರಿಗಳಾದ, [ಅಸುರಸ್ಯ] ಪ್ರಾಣದಾಯಕನಾದ ಪರಮಾತ್ಮನ. [ವೀರಾಃ] ವೀರಪುತ್ರರಾದ, [ಅಂಗಿರಸಃ] ಆತ್ಮನಲ್ಲೇ ರಮಿಸುವ ಅಥವಾ ಪ್ರಾಣಸ್ವರೂಪರಾದ, [ವಿರೂಪಾಃ] ನಾನಾ ರೂಪಗಳನ್ನುಳ್ಳ, ವಸ್ತ್ರದಾತರು. ಅನ್ನದಾದಾತರು, ಜ್ಞಾನದಾತರು. ಗೃಹದಾತರು ಮೊದಲಾದ ನಾನಾ ರೂಪಗಳಲ್ಲಿ ಕಂಡುಬರುವ [ಭೋಜಾಃ] ಬೇರೆಯವರಿಗೆ ಊಟಮಾಡಿಸುವ, ಲೋಭರಹಿತರಾದ ಮಾನವರು [ವಿಶ್ವಾಮಿತ್ರಾಯ] ಸಮಸ್ತ ವಿಶ್ವಕ್ಕೂ ಮಿತ್ರನಾದ, ಸರ್ವಸ್ನೇಹೀ ಪರಮಾತ್ಮನ ಪ್ರಾಪ್ತಿಗಾಗಿಯೇ, ಈಶ್ವರ ಸಾಕ್ಷಾತ್ಕಾರದ ಸಾಧನವಾಗಿಯೇ, [ಮಘಾನಿ] ಐಶ್ವರ್ಯಗಳನ್ನು, [ದಧತಃ] ಧರಿಸುತ್ತಾ, [ಸಹಸ್ರಸಾವೇ] ಸಾವಿರ ಬಗೆಯ ಸಂಪತ್ತನ್ನು ಸ್ರವಿಸುವ ಈ ಜಗತ್ತಿನಲ್ಲಿ, [ಪ್ರ] ಉತ್ತಮ ರೀತಿಯಲ್ಲಿ [ಆಯುಃ] ಬಾಳನ್ನು, [ತಿರಂತ] ನಡೆಸುತ್ತಾರೆ.

ಪ್ರಿಯ ಮಾನವತಾಪ್ರೇಮಿಗಳೇ! ಒಂದೊಂದು ಮಂತ್ರವೂ ಒಂದೊಂದು ದೈವೀಸಂಪತ್ತಿನ ಕೋಶದಂತಿದೆ. ನಾವು ಸರಳವಾದ ಅರ್ಥಕೊಟ್ಟಿದ್ದೇವೆ. ಆಲೋಚನೆ ಮಾಡಿದಷ್ಟೂ ಒಂದೊಂದು ಶಬ್ದದಿಂದಲೂ ಮಹದದ್ಭುತವಾದ ಅರ್ಥ ಹೊರಡುತ್ತದೆ. **"ಮನುರ್ಭವ ಜನಯಾ ದೈವ್ಯಂ ಜನಂ"** [ಋಗ್ವೇದ ೧೯, ೫೩, ೬] "ಮನನಶೀಲನಾಗು; ದಿವ್ಯನಾದ ಮಾನವನನ್ನು ಸೃಜಿಸು" ಎನ್ನುವಾಗ, ವೇದದ ಆಶ್ರಯವು, ನಾವೆಲ್ಲಾ ಇಂತಹ ಆದರ್ಶ ಮಾನವರಾಗಬೇಕೆಂಬುದೇ ಆಗಿರುತ್ತದೆ. ಆದುದರಿಂದ, ಬನ್ನಿರಿ ವೇದದ ಆಜ್ಞೆಯಂತೆ ಉಲೂಕಯಾತು, ಶುಶುಲೂಕಯಾತು, ಶ್ವಯಾತು, ಕೋಕಯಾತು, ಸುಪರ್ಣಯಾತು, ಮತ್ತು ಗೃಧ್ರಯಾತು ಎಂಬ ಆರು ರಾಕ್ಷಸೀ ವೃತ್ತಿಗಳನ್ನು ಸಂಪೂರ್ಣವಾಗಿ ಹೊಡೆದು ಕೆಡಹೋಣ. ಈಗ ತಾನೇ ಉದ್ಧರಿಸಿರುವ ಆರು ಭವ್ಯ ಮಂತ್ರಗಳಲ್ಲಿ ವರ್ಣಿತವಾಗಿರುವ ದಿವ್ಯಗುಣಗಳಿಂದ ವಿಭೂಷಿತರಾಗೋಣ. ಇದೋ ಆ ಸ್ಥಿತಿಯಲ್ಲಿ ನಮ್ಮ ಸ್ವರೂಪ ಹೀಗಿರುವುದು:–

**ಅಗ್ನಿಶ್ರಿಯೋ ಮರುತೋ ವಿಶ್ವಕೃಷ್ಟಯ ಆತ್ವೇಷಮುಗ್ರಮವ ಈ ಮಹೇವಯಂ । ತೇ ಸ್ವಾನಿನೋ ರುದ್ರಿಯಾ ವರ್ಷ ನಿರ್ಣಿಜೋ ಸಿಂಹಾ ನ ಹೇಷಕ್ರತವಃ ಸುದಾನವಃ ॥**

[ಋಗ್ವೇದ ೩, ೨೬, ೫]

[ವಯಂ] ನಾವು, [ಅಗ್ನಿಶ್ರಿಯಃ] ಪರಮತೇಜಸ್ವೀ ಪರಮಾತ್ಮನ ಸಂಪತ್ತಿನಿಂದ ಯುಕ್ತರೂ, [ಮರುತಃ] ಸಂಯಮಿಗಳೂ, [ವಿಶ್ವಕೃಷ್ಟಯಃ] ವಿಶ್ವದ ನಾಗರಿಕರೂ, ವಿಶ್ವವನ್ನು ತಮ್ಮೆಡೆ ಆಕರ್ಷಿಸುವವರೂ, [ಸ್ವಾನಿನಃ] ಮಂಗಳನಾದ ಮಾಡುವವರೂ, [ರುದ್ರಿಯಾಃ] ರುದ್ರನ ಎಂದರೆ ಪಾಪ ರೋಗ ನಿವಾರಕನಾದ ಪರಮಾತ್ಮನ ಭಕ್ತರೂ, [ವರ್ಷನಿರ್ಣಿಜಃ] ಶಾಂತಿ ವೃಷ್ಟಿಯಿಂದ ನಿರ್ಮಲರೂ, [ಸುದಾನವಃ] ಉತ್ತಮ ದಾನಿಗಳೂ, [ಸಿಂಹಾಃನ] ಸಿಂಹಗಳಂತೆ, [ಹೇಷಕ್ರತವಃ] ಗಂಭೀರ ಶಬ್ದಕಾರಿಗಳೂ ಆಗಿ, [ಉಗ್ರಂ] ತೀವ್ರವಾದ, [ತ್ವೇಷಂ] ಬಲವನ್ನೂ, [ಅವಃ] ರಕ್ಷಣೆಯನ್ನೂ, [ಆ ಈಮಹೇ] ಅವಲಂಬಿಸೋಣ.

ಈ ಕೆಚ್ಚು, ಬಲ್ಮೆ, ಈ ಸಾತ್ವಿಕವಾದ ಆತ್ಮಾಭಿಮಾನ, ಮೇಲೆ ಹೇಳಿದ ರಾಕ್ಷಸೀ ವೃತ್ತಿಗಳಿಗೆ ನಾವು ದಾಸರಾಗಿರುವವರೆಗೆ ನಮಗೆ ಲಭಿಸಲಾರದು. ಆದುದರಿಂದ, ಬನ್ನಿರಿ, ದಿಟ್ಟತನದಿಂದ, ನೆಟ್ಟಮನಸ್ಸಿನಿಂದ, ಕೆಟ್ಟದೆಲ್ಲವನ್ನೂ ಸುಟ್ಟು ಬೂದಿಮಾಡಿ, ಒಟ್ಟಾಗಿ ಬಾಳಿ, ಒಟ್ಟಾಗಿ ಏಳಿಗೆ ಹೊಂದಿ **"ಭಲೇ! ಇವರೀಗ ವೈದಿಕರು; ವೈದಿಕ, ಆದರ್ಶ ಮಾನವ ಎರಡರರ್ಥವೂ ಒಂದೇ"** ಎಂದು ಸಮಸ್ತ ವಿಶ್ವವೂ ಮೆಚ್ಚುಗೆಯಿಂದ ತಲೆದೂಗುವಂತೆ, ಶಕ್ತಿಯ ಪುಂಜಗಳಾಗಿ, ಸ್ಫೂರ್ತಿಯ ಬುಗ್ಗೆಗಳಾಗಿ, ಮಾನವತ್ವದ ಗೌರವ ಮೂರ್ತಿಗಳಾಗಿ, ಸ್ವತಂತ್ರರಾಗಿ ವೇದಘೋಷ ಮಾಡುತ್ತಾ, ಭೇದ= ನಾಶಮಾಡುತ್ತಾ ಆತ್ಮವಿಕಾಸ ಸಾಧಿಸುತ್ತಾ, ಸಾಂತ ವಿಶ್ವದ ಕಡೆಯಿಂದ ಅನಂತಜ್ಯೋತಿಯ ಕಡೆ ಮೊಗಮಾಡಿ ನಡೆಯೋಣ. ನೆನಪಿರಲಿ, ವೇದದ ಕರೆ:–

**ತ್ವಯಾ ಮನ್ಯೋ ಸರಥಮಾರುಜಂತೋ ಹರ್ಷಮಾಣಾಸೋ ಧೃಷಿತಾ ಮರುತ್ವಃ । ತಿಗ್ಮೇಷವ ಆಯುಧಾಃ ಸಂಶಿಶಾನಾ ಅಭಿಪ್ರಯಂತು ನರೋ ಅಗ್ನಿರೂಪಾಃ ॥** [ಋ. ೧೦, ೮೪, ೧]

[ಮನ್ಯೋ] ಮನಶಕ್ತಿಯ ಸ್ವಾಮಿಯೇ! [ತ್ವಯಾ ಸರಥಂ] ನಿನ್ನೊಂದಿಗೆ ಇದ್ದು, ಆಸ್ತಿಕರಾಗಿ, [ನರಃ] ಮಾನವರು [ಆರು ಜಂತಃ] ಕಷ್ಟ ಕಾರ್ಪಣ್ಯಗಳನ್ನು ತರಿದೊಟ್ಟುತ್ತಾ [ಹರ್ಷ ಮಾಣಾಸಃ] ಸದಾ ಪ್ರಸನ್ನರಾಗಿರುತ್ತಾ [ಧೃಷಿತಾಃ] ಧೀರರಾಗಿ, ಸಹಿಷ್ಣುಗಳಾಗಿ, [ತಿಗ್ಮೇಶವಃ] ತೀವ್ರವಾದ ಕಾಮನೆಗಳುಳ್ಳವರಾಗಿ [ಆಯುಧಾಃ] ಮಾನವನನ್ನೆತ್ತಿಹಿಡಿವ ಗುಣಗಳನ್ನು. [ಸಂಶಿಶಾನಾಃ] ಹರಿತಗೊಳಿಸುತ್ತಾ, [ಅಗ್ನಿ ರೂಪಾಃ] ಅಗ್ನಿಯಂತೆ ತೇಜಸ್ವಿಗಳಾಗಿ ಇತರರಿಗೂ ಜ್ಯೋತಿ ಬೀರುವವರಾಗಿ, [ಅಭಿಪ್ರಯಂತು] ಎಲ್ಲೆಡೆಯಿಂದಲೂ ಮುಂದೆ ಮುಂದೆ ಸಾಗುವಂತಾಗಲಿ.

**ಓ ಮಾನವರಿಗೆ** ಆದರ್ಶನಾದ ಸಕಲ ಕಲ್ಯಾಣ ಗುಣಗಣ ನಿಧಾನ ಪ್ರಭೋ! "ಆದರ್ಶಮಾನವ"ರಾಗುವ ಅಧ್ಯಾತ್ಮಿಕ ಶಕ್ತಿಯನ್ನೂ, ಮನೋಬಲವನ್ನೂ ನಮ್ಮೆಲ್ಲರಿಗೂ ಕರುಣಿಸು,

**ಹೇ ಈಶ್ವರ ದಯಾನಿಧೇ । ಭವತ್ಕೃಪಯಾಽನೇನ ಜಪೋಪಾಸನಾದಿಕರ್ಮಣಾ ಧರ್ಮಾರ್ಥಕಾಮಮೋಕ್ಷಾಣಾಂ ಸದ್ಯಃಸಿದ್ಧಿರ್ಭವೇನ್ನಃ ॥**

ಹೇ ಜಗದೀಶ್ವರನಾದ ಪ್ರಭುವೇ ! ನಿನ್ನ ಕೃಪೆಯಿಂದ ನಮ್ಮ-ಜಪ-ಉಪಾನಾದಿ-ಎಲ್ಲಾ ಕರ್ಮಗಳೂ, ಯಥಾವತ್ 'ಧರ್ಮ-ಅರ್ಥ-ಕಾಮ-ಮೋಕ್ಷ'ವೆಂಬ ಚತುರ್ವಿಧ ಪುರುಷಾರ್ಥಪ್ರಾಪ್ತಿಗೆ ಅನುಕೂಲವಾಗುವಂತೆ, ನಮ್ಮಲ್ಲಿ ಸದ್ಗುಣಗಳ ಸಮೂಹ, ಪ್ರಾಮಾಣಿಕವಾದ ಸಂಪಾದನೆ, ವೇದಾನುಕೂಲವಾದ ಭೌತಿಕ ಸುಖ ಹಾಗೂ ತ್ರಿವಿಧತಾಪಗಳ ಪರಿಹಾರಕ್ಕಾಗಿ ಸಿದ್ಧಿಯು ಉಂಟಾಗುವಂತೆ ಅನುಗ್ರಹಿಸು.

**॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**




# ಭಾರತೀಯ ಪುರುಷರೆಲ್ಲರ ಸಲುವಾಗಿ ನಾಲ್ಕು ಮಾತುಗಳು

ಪ್ರಿಯ ಧರ್ಮ ಬಂಧುಗಳೇ!

ಉಡುಪಿಯ ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ ತಮ್ಮ ದ್ವಾರಕ್ಕೆ ಬಂದು ನಿಂತಿದೆ. ಸಮಿತಿಯ ಉದ್ದೇಶ್ಯ ತಮಗೆ ತಿಳಿಯದ ವಿಷಯವೇ? ಭಗವದ್ವಾಣಿ ವೇದಗಳ **"ಜ್ಯೋತಿಷ್ಮತಃ ಪಥೋ ರಕ್ಷ ಧಿಯಾಕೃತಾನ್"** [ಋಗ್ವೇದ:- 10.53.6]; **ಉದ್ಯಾನಂತೇ ಪುರುಷ ನಾವಯಾನಂ"** [ಅಥರ್ವ:-8. 1. 6.] ‹ಬುದ್ಧಿಪೂರ್ವಕವಾಗಿ ರಚಿತವಾದ ಪ್ರಕಾಶಮಯ ಮಾರ್ಗಗಳನ್ನು ರಕ್ಷಿಸು; ಓ ಮಾನವ! ಉನ್ನತಿ ಹೊಂದುವುದೇ ನಿನ್ನ ಗುರಿಯಾಗಿರಲಿ; ಎಂದಿಗೂ ಕೆಳಕ್ಕೆ ಇಳಿಯುವುದಲ್ಲ ಎಂಬ, ಭವ್ಯಾದೇಶ ಗಳನ್ನೇ ಮುಂದಿಟ್ಟುಕೊಂಡು, ಸಮಸ್ತ ಮಾನವ ಸಮಾಜವನ್ನು ಸರ್ವಾಂ ಗೀಣ ಸಮುತ್ಥಾನದ ಸತ್ಪಥದಲ್ಲಿ ನಡೆಯಿಸುವ ಪವಿತ್ರ ಸಂಕಲ್ಪ ಹೊಂದುತ್ತಾ ಸಮಿತಿ ಈಗ ತಮ್ಮ ದ್ವಾರದಲ್ಲಿ ನಿಂತು **"ಭಿಕ್ಷಾಂದೇಹಿ"** ಎನ್ನುತ್ತಿದೆ. ಅತ್ಯುತ್ತಮ ವೈದಿಕ ಸಾಹಿತ್ಯದ ಗ್ರಂಥಗಳ ಪ್ರಕಾಶನದ ಮೂಲಕವೂ, ಅನಾಥಾಶ್ರಮ, ಚಿಕಿತ್ಸಾಲಯ, ಯೋಗಾನುಷ್ಠಾನಶಾಲೆ, ವಿದ್ಯಾರ್ಥಿನಿಲಯ ಗಳು - ಮೊದಲಾದ ಜನೋಪಯುಕ್ತ ರಚನಾತ್ಮಕ ಕಾರ್ಯಕ್ರಮಗಳ ಮೂಲಕವೂ ವಿಮತೀಯರೊಡ್ಡುವ ಪ್ರಲೋಭನಗಳಿಗೆ ಬಲಿ ಬೀಳದಂತೆ ನಮ್ಮವರನ್ನು ರಕ್ಷಿಸುವ ಗುರುಭಾರವನ್ನು ತನ್ನ ಹೆಗಲ ಮೇಲೆ ಹೊರು ತ್ತಿದೆ; ತಮ್ಮೆಲ್ಲರ ಪೂರ್ಣ ಸಹಾಯ ಸಹಕಾರದ ದೃಢವಾದ ನಂಬಿಕೆ ಯನ್ನು ಹೃದ್ಗತ ಮಾಡಿಕೊಂಡೇ ಬೂತ್ತಿದೆ. ತಮ್ಮ ಸೌಹಾರ್ದ—ಔದಾರ್ಯದ ಬಗೆಗೆ ಸಮಿತಿ ಎಳ್ಳಿನ ಸಹಸ್ರಾಂಶದಷ್ಟೂ ಸಂದೇಹಪಟ್ಟಿಲ್ಲ.

ಧರ್ಮ ಬಾಂಧವರೇ! ತಮ್ಮ ಜೀವನದಲ್ಲಿನ ಹರ್ಷದ ತೃಪ್ತಿಯ ಬುಗ್ಗೆ ಬತ್ತಿಹೋಗಲಿ. ಎಂದಾಗಲೀ; ತಮ್ಮ ಜೀವನದ ಕಷ್ಟ-ಕಾರ್ಪಣ್ಯ ಗಳ ಮೇಲೆ ಸಮಿತಿಯ ಪ್ರತಿಷ್ಠೆ ಬೆಳೆದು ಬರಲಿ ಎಂಬ ಭಾವನೆಯಾಗಲೀ

ಸಮ್ಮತದಲ್ಲ. ಆಧುನಿಕ ವೈಜ್ಞಾನಿಕ ಪ್ರಗತಿ ತಮ್ಮ ಜೀವನವನ್ನು ಎಷ್ಟು ಮನೋರಂಜಕವಾಗಿ ಮಾಡಲು ಸಮರ್ಥವೋ, ಅಷ್ಟೂ ಮನೋರಂಜನ ತಮ್ಮ ಬಾಳಿಗೆ ಬೆಳೆದು ಬರಲಿ-ಎಂದೇ ಸಮಿತಿ ಆಶಿಸುತ್ತದೆ. ಆದರೆ, ಪರಿಶುದ್ಧ ಧರ್ಮ, ಮಾನವೀಯ ಸಂಸ್ಕೃತಿ, ಸಾರ್ವಭೌಮ ನೀತಿ ಹಾಗೂ ಬಾಹ್ಯಾಭ್ಯಂತರ ಸಮತೋಲನ-ಇವಕ್ಕೆಲ್ಲಾ ತಿಲೋದಕವಿತ್ತು, ವಿದೇಶಿಯರ, ಕೇವಲ ಭೌತಿಕ ಭೋಗವಿಲಾಸದ ದಿಕ್ಕಿಗೇ ಮಾನವನನ್ನು ತಿರಗಿಸುತ್ತಿರುವ, ಮಾನವನನ್ನು ದಾನವನಾಗಿ ಪರಿವರ್ತಿಸುವ, ಪ್ರಚಲಿತ ಮನೋಭಾವ ಮಾತ್ರ ಯಾರಿಗೂ ಶ್ರೇಯಸ್ಕರವಲ್ಲ; ಎಂದಿಗೂ ಶ್ರೇಯಸ್ಕರವಲ್ಲ; ಎಲ್ಲಿಗೂ ಶ್ರೇಯಸ್ಕರವಲ್ಲ. ಅಪ್ರತಿಹತ ಗತಿಯಿಂದ ಸರ್ವನಾಶದ ತಳವಿಲ್ಲದ ಆಳಕ್ಕೆ ಬೀಳುವ ಮಾನವ ಸಮಾಜವನ್ನು ಎತ್ತಿ ಹಿಡಿಯದೆ ಕಂಡೂ ಕಂಡೂ ಕಣ್ಮುಚ್ಚಿ ಕುಳ್ಳಿರುವುದು ವಿಚಾರಶೀಲರಾರಿಗೂ ಉಚಿತವಲ್ಲ.

ಇದೇ ಕಾರಣದಿಂದ, ಸಮಿತಿ ತಮ್ಮ ಬಾಗಿಲನ್ನು ತಟ್ಟುತ್ತಿದೆ: ತಮ್ಮನ್ನು ಬೈರಾಗಿಗಳಾಗಿ ಮಾಡುವ ಮನೋಭಾವ ಸಮಿತಿಗಿಲ್ಲ. ತಾವು ಸಾತ್ವಿಕವೂ, ಆರೋಗ್ಯ-ಸಾಮರ್ಥ್ಯವರ್ಧಕವೂ ಆದ ಆಹಾರ ಪಾನೀಯಗಳನ್ನು ಹಿತವಾಗಿಯೂ ಮತ್ತು ಮಿತವಾಗಿಯೂ ಸೇವಿಸಿರಿ. ಮಾನವತ್ವದ ಗೌರವವನ್ನು ವರ್ಧಿಸುವ, ಸಭ್ಯ-ಸಂಸ್ಕೃತ ವೇಷಭೂಷಣಗಳಿಂದಲೂ ತಾವು ವಿರಾಜಿಸಿರಿ. ಆದರೆ, ಬಾಂಧವರೇ! ಜೀವನ ವಿಕಾಸಕ್ಕೆ ಯಾವುದೇ ರೀತಿಯಿಂದಲೂ ಸಹಾಯಕವಾಗದೆ, ಆರೋಗ್ಯಕ್ಕೆ ಧಕ್ಕೆ ತರುವ ಬೀಡಿ, ಚುಟ್ಟಾ, ಮಾದಕ ದ್ರವ್ಯಗಳು ಈ ಮೊದಲಾದ ದುಶ್ಚಟಗಳಿಗಾಗಿ ಹಾಗೂ ಇನ್ನಿತರ ಮಿತಿಮೀರಿದ ಭೌತಿಕ ವಿಲಾಸ ಪ್ರವೃತ್ತಿಗಳಿಗಾಗಿ ಸುರಿಯುವ ಧನವನ್ನೇ ಉಳಿಸಿ, ಅದನ್ನು ಸಮಿತಿಗೆ ಉಲ್ಲಸಿತಮನದಿಂದ, ಉದಾರವಾದ ಹೃದಯದಿಂದ ಕೊಡುವುದಾದರೆ, ತಮ್ಮ ಇಹ - ಪರವೆರಡೂ ಉತ್ತಮವಾಗುವುದರಲ್ಲಿ ಸಂದೇಹವಿಲ್ಲ. ಒಟ್ಟಿನಲ್ಲಿ, ಮಾನವ ನಿಜವಾದ ಅರ್ಥದಲ್ಲಿ ಮಾನವನಾಗಬೇಕಾಗಿದೆ. ಅದಕ್ಕೆ ದುರ್ವೃತ್ತಿಗಳ ನಿಯಂತ್ರಣ, ಆತ್ಮಸಂಯಮ ಇಂದು ವ್ಯಕ್ತಿ ವ್ಯಕ್ತಿಗೂ ಆವಶ್ಯಕ ಮಾತ್ರವಲ್ಲ; ಅನಿ

ವಾರ್ಯ. ಋಗ್ವೇದ–**"ಮಾ ರುವಣ್ಯ"** ಅಳಬೇಡ ಎನ್ನುತ್ತದೆ. ಅಥರ್ವ– **"ಪ್ರಾಂಚೋ ಅಗಾಮ ನೃತಯೇ ಹಸಾಯ"**. [12. 2. 22] ನರ್ತಿಸಲು ನಗಲು, ಸದಾಚಾರಿ-ಸದ್ವಿಚಾರಿಗಳಾಗಿ ಮುನ್ನುಗ್ಗಿರಿ ಎನ್ನುತ್ತದೆ. ಮತ್ತು ಅಳುವಿನ ತಲೆಮೆಟ್ಟಿ ನಿಲ್ಲುವ, ನಗೆಯ ಹೊಳೆಯನ್ನು ಹರಿಸುವ ಹಿರಿಮೆ ಸಂಯಮಿಗೆ ಮಾತ್ರ ಮುಡಿಪು; ಭೋಗವಿಲಾಸಮಯ ಮಾನವನು ಮರ್ಮಸ್ಪರ್ಶೀ ಮ್ಲಾನತೆಯ, ಮುದುಡಿ ಹೋದ ಮನದ ಮೂರ್ತಿಮಾತ್ರನಾದಾನು; ನಗೆ, ಉಲ್ಲಾಸಮಯ ನರ್ತನ ಆವನ ಪಾಲಿಗೆ ಶೂನ್ಯ.

ಆದುದರಿಂದ, ಪ್ರಿಯ ಸಜ್ಜನರೇ! ಸಮಿತಿಯ ಪ್ರತಿನಿಧಿ ನಿಮ್ಮ ಬಾಗಿಲನ್ನು ತಟ್ಟಿದಾಗ, ಅಕ್ಕರೆಯಿಂದ ಓ ಎನ್ನಿರಿ. ಅನಾವಶ್ಯಕವಾದ ಕೃತ್ರಿಮ ಭೋಗ ವಸ್ತುಗಳ ಬಹಿಷ್ಕಾರದಿಂದ ಉಳಿದ ಧನವನ್ನು ಸಮಿತಿಗೆ ತೆರೆದ ಮನದಿಂದ ಒಪ್ಪಿಸಿ, ಪುಣ್ಯಭಾಜನರಾಗಿ. ವ್ಯಕ್ತಿ–ವ್ಯಕ್ತಿಯ ಬಾಳೂ ಬಲ್ಮೆಯ ಬೀಡಾದಾಗ, ಸಾಮಾಜಿಕ ಶಕ್ತಿ, ರಾಷ್ಟ್ರೀಯ ಶಕ್ತಿಗಳು ತಾವಾಗಿಯೇ ಮೈತಳೆದು, ಸಂಪೂರ್ಣವಿಶ್ವ 'ಓ! ಅದೇ ವೃದ್ಧ—ಸಮೃದ್ಧ ಭಾರತ ಮತ್ತೆಮ್ಮ ಗುರುವಾಯಿತು.' ಎನ್ನುವ ಕಾಲ ದೂರವಿರದು. ಆದುದರಿಂದ, ಭದ್ರ ಪುರುಷರೇ! **'ಮನುರ್ಭವ; ಜನಯಾ ದೈವ್ಯಂ ಜನಂ'** [ಋಗ್ವೇದ :- 10. 53. 6] ಮನನಶೀಲನಾಗು. ದಿವ್ಯ ಜನ–ಸಮಾಜಕ್ಕೆ ರೂಪಕೊಡು ಎಂಬ ವೇದವಾಣಿಗೆ ಕಿವಿಗೊಡಿರಿ. ಮತ್ತೆಲ್ಲ ಶುಭವೇ; ಮತ್ತೆಲ್ಲ ಮಂಗಳವೇ! ತಾವು ಸಮರ್ಪಣೆಮಾಡುವ ದಾನ, ತಮ್ಮ ಆರೋಗ್ಯ ರಕ್ಷಣೆಯನ್ನು ಮಾಡುವುದಲ್ಲದೆ, ಧರ್ಮದ ಪುನರುತ್ಥಾನಕ್ಕೂ ವೇದಗಳ ರಕ್ಷಣೆಗೂ ನೆರವಾಗುವುದು. ನೀವೂ ಸಹಕರಿಸಿರಿ. ಮತ್ತೂ ನಿಮ್ಮ ಮಿತ್ರರನ್ನೂ ಸಮಿತಿಗೆ ನೆರವಾಗುವಂತೆ ಮಾಡಿರಿ.

**ಏಕಗಂಟಿನಿಂದಾಗಲೀ ತಿಂಗಳಿಗೊಂದಾವರ್ತಿಯಾಗಲೀ ಯುಕ್ತ ಕಂಡಂತೆ ದಾನ ಮಾಡಿರಿ.**

**ಈ ಬಗ್ಗೆ ಸಮಿತಿಯ ಕಡೆಯಿಂದ ಕ್ರಮವಾದ ರಶೀದಿ ಪಡಕೊಳ್ಳಿರಿ.**

# ಭಾರತೀಯ ನಾರಿಯರೆಲ್ಲರ ಸಲುವಾಗಿ ನಾಲ್ಕು ಮಾತುಗಳು.

ಉಡುಪಿಯ "ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ" ಯಾವುದೇ ಒಂದು ಸಂಪ್ರದಾಯದ ಏಕ ತಂತ್ರ ಸಿದ್ಧಾಂತಕ್ಕೂ ಕಟ್ಟು ಬಿದ್ದ ಸಂಕುಚಿತ ದೃಷ್ಟಿಯ ಮತೀಯ ಸಂಸ್ಥೆಯಲ್ಲ. ಸಮಿತಿಯು ತನ್ನ ಸಮಸ್ತ ಸಾಮರ್ಥ್ಯ ವನ್ನೂ ಧಾರಾಳವಾಗಿ ಬೆಳೆಸಿ ಹಾಗೂ ಬಳಸಿ ದುಡಿಯುವುದು ಕೇವಲ ಒಂದೇ ಒಂದು ಉದ್ದೇಶ್ಯದ ಪೂರ್ತಿಗಾಗಿ. ಆ ಉದ್ದೇಶ್ಯ-ಸಂಪೂರ್ಣ ಮಾನವ ಜನಾಂಗದ ಸರ್ವವಿಧ ಸಮುತ್ಥಾನ.

ಮಾತೃಶಕ್ತಿ ಸ್ವರೂಪಿಣಿಯರಾದ ತಾಯಂದಿರೇ! ಈ ಮಹದುದ್ದೇಶ್ಯ ಸಾಧನೆಯಲ್ಲಿ ತಮ್ಮ ಪಾತ್ರ ಬಹುದೊಡ್ಡದಿದೆ. ಭಗವದ್ವಾಣಿಗಳಾದ ವೇದ ಗಳಲ್ಲಿ **'ಜಾಯೇ ದಸ್ತಂ'** [ಋಗ್ವೇದ 3. 5. 4]; **ಯೋಷಿತೋ ಯಜ್ಞಿಯಾ:, ಇಮಾ** [ಅಥರ್ವ:- 11. 1. 17] ಈ ಮೊದಲಾದ ವಚನಗಳು 'ಗೃಹಿಣಿಯೇ ಗೃಹ, ನಾರಿಯರು ಪೂಜನೀಯರು.' ಎಂದು ಸಾರುತ್ತಿವೆ. ತೈತ್ತಿರೀಯೋಪನಿಷತ್ಕಾರರೂ "ಮಾತೃ ದೇವೋ ಭವ" ಎಂದು ಹೇಳಿ, ತಂದೆ ಆಚಾರ್ಯರಿಗಿಂತ ಮುನ್ನ ತಾಯಿಯನ್ನೇ ದೇವರೆಂದರಿತು ಗೌರವಿಸು. ಎಂದಿದ್ದಾರೆ. ಮನುವಂತೂ **ಓರ್ವ ತಾಯಿ ಸಾವಿರ ಜನ ತಂದೆಯರಿಗಿಂತಧಿಕ ಗೌರವಾರ್ಹಳು,** [ಮನು:-4-17] ಎಂದಿದ್ದಾನೆ.

ಮಾತೆಯರೇ! ನಮ್ಮ ಸಮಿತಿ ಈ ಪವಿತ್ರ ಶಾಸ್ತ್ರೋಕ್ತಿಗಳನ್ನು ದೃಕ್ಷಥದಲ್ಲಿಟ್ಟುಕೊಂಡು, ಆದರಣೀಯರಾದ ತಮ್ಮ ಮುಂದೆ ಜೋಳಿಗೆ ಹಿಡಿದು ನಿಂತಿದೆ. ತಾವು ನಾರುಮಡಿಯುಡಬೇಕು; ಕಾನನ ನಿವಾಸಿಗಳಂತಿರ ಬೇಕು-ಎಂದೇನೂ ಹೇಳುವುದಿಲ್ಲ. **ಸುರೂಪಕೃತ್ನು**ಪಾದ, ಭಗವಂತನ ಈ ಸೃಷ್ಟಿಯಲ್ಲಿ [ಋಗ್ವೇದ:-1. 4. 1.] ಸುಂದರ ರಚನಾ ಕರ್ತೃವಾದ, ಭಗವಂತನ ಈ ಪ್ರಪಂಚದಲ್ಲಿ ತಾವು ಕುರೂಪರಾಗಿರಬೇಕೆಂದು ಸಮಿತಿ ಏನೂ ಹೇಳುವುದಿಲ್ಲ. ತಾವು ಸುಂದರವಾದ, ಗೌರವವರ್ಧಕವಾದ,

ಪುರುಷರಲ್ಲಿನ ಸುಪ್ತಪಾಶವೀ ಭಾವನೆಗಳನ್ನೆಚ್ಚರಿಸದ ಉಡಿಗೆ ತೊಡಿಗೆಗಳಿಂದಲೇ, ಒಡವೆಗಳಿಂದಲೇ ಅಲಂಕೃತರಾಗಿರಿ. ಶುದ್ಧ ಸಾತ್ವಿಕ-ವಿಹಾರಗಳಿಂದ ಮಾನವನ ಕುಲಕ್ಕೇ ಅಲಂಕಾರ ಪ್ರಾಯರಾಗಿ ವಿರಾಜಿಸಿರಿ. ಆದರೆ, ಸಮಿತಿ ತಮ್ಮಿಂದ ಕೋರುವುದಿಷ್ಟೇ. **ಮದುವೆ - ಮುಂಜಿ, ಹಬ್ಬ 'ಹರಿದಿನಗಳ ಹೆಸರಿನಲ್ಲಿ, ಸಾಮಾಜಿಕ ಸ್ತರದ ಔನ್ನತ್ಯದ ಭ್ರಾಂತಿಯಲ್ಲಿ, ಇನ್ನೂ ಅನೇಕ ಅರ್ಥವಿಲ್ಲದ ಆಡಂಬರಗಳಿಗಾಗಿ ದುರ್ವಿನಿಯೋಗವಾಗುವ ಹಣವನ್ನು ಸಮಿತಿಯ ಜೋಳಿಗೆಗೆ ಹಾಕಿ, ವಿಧವೆಯರಾಗಿಯೋ, ಪತಿ-ಪರಿತ್ಯಕ್ತೆಯರಾಗಿಯೋ ಅನಾಥೆಯರಾಗಿಯೋ ಅಸಹಾಯ ಸ್ಥಿತಿಗೆ ಸಿಕ್ಕು ವಿಮತೀಯರ ಬಲೆಗೆ ಬೀಳುತ್ತಿರುವ ಅಬಲೆಯರ ಸಲುವಾಗಿ ಸಮಿತಿ ನಡೆಯಿಸಬೇಕೆಂದಿರುವ ಅಬಲಾಶ್ರಮ ನಿಧಿಗಾಗಿ ದಾನ ಮಾಡಿ. ಈ ಪವಿತ್ರ ಯಜ್ಞ ಕಾರ್ಯದಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸಬೇಕೆಂದು ಕೋರುತ್ತೇವೆ.**

**'ಸಮಿತಿ'** ಕೇವಲ ಪುರುಷರ ಸುಧಾರಣೆಯಿಂದ ವೈದಿಕ ಧರ್ಮ ಪ್ರಚಾರವಾದೀತೆಂದು ನಂಬುವುದಿಲ್ಲ. ಮಾನವ ಸಮಾಜದ ಅರ್ಧಭಾಗ ಸ್ತ್ರೀಯರು ಹೀಗೆಯೇ ಉಳಿದಿದ್ದರೆ ಮಾನವ ಸಮಾಜ ಮುಂದುವರಿಯುವುದು ಸ್ವಪ್ನವೇ ಸರಿ.

ಆದುದರಿಂದ ಪರಮಾದರಣೀಯ ಮಾತೆಯರೇ! ತಾವು ತಮ್ಮ ಪತಿದೇವರುಗಳೊಂದಿಗೆ ಪಂಚಮಹಾಯಜ್ಞಗಳಲ್ಲಿ ಸಹಕರಿಸುವಾಗ, ದೀನ-ಹೀನರ, ದುಃಖೀರೋಗಿಗಳ ಸೇವಾಶುಶ್ರೂಷೆಗಳ ಉದ್ದೇಶ್ಯ ಹೊಂದಿರುವ ಬಲಿವೈಶ್ವ ದೇವಯಜ್ಞದಲ್ಲಿ ಸಕ್ರಿಯ ಪಾತ್ರವಹಿಸಿರಿ. ಸಾಧ್ಯವಾದಷ್ಟೂ ಉಳಿತಾಯಗೈದು ನಮ್ಮ ಸಮಿತಿಗೆ ಎಲ್ಲ ರೀತಿಯಲ್ಲಿಯೂ ಕ್ರಿಯಾತ್ಮಕ-ಸಹಕಾರವನ್ನು ದಯಪಾಲಿಸಿರಿ ಎಂದು ಕೋರುತ್ತೇವೆ. ಮಾತೃಶಕ್ತಿಗಿಂತ ಹಿರಿಯ ಶಕ್ತಿಯು ಮತ್ತಾವುದೂ ಇಲ್ಲ. ಮಾತೃಶಕ್ತಿ ಜಾಗೃತವಾದರೆ ಸಾಧಿಸಲಾಗದ ಕಾರ್ಯವಾವುದೂ ಇಲ್ಲ. ಕೊಡುವ ಮತ್ತು ರಕ್ಷಣೆ ಮಾಡುವ

ಸಾಮರ್ಥ್ಯ ಸ್ತ್ರೀ ಸಹಜವಾದ ನೈಸರ್ಗಿಕ ಮಾರ್ಗ, ಆದರೆ ಅದನ್ನು ವಿನಿಯೋಗಿಸುವ ಧಾರ್ಮಿಕ ಭಾವನೆಯಿಂದ ಕೂಡಿದ ಹೃದಯವೈಶಾಲ್ಯವಿರಲಿ. ವಿವಂಚಿತರಾಗದೆ ವಿಮರ್ಶಾತ್ಮಕ ದೃಷ್ಟಿಯಿಂದಲೂ ಕರ್ತವ್ಯ ದೃಷ್ಟಿಯಿಂದಲೂ ದಾನಕೊಡಿರಿ. ಸಮಿತಿಗೆ ಮಾಡುವ ದಾನ ನಿಮ್ಮ ಮನದಿಚ್ಛೆಯನ್ನು ಪೂರೈಸುವುದಲ್ಲದೆ ಸಂತಪ್ತ ಭಗಿನಿಯರ ಕಲ್ಯಾಣಕ್ಕೆ ನೆರವಾಗುವುದೆಂದೂ ಮತ್ತು ವೇದಗಳ ಪ್ರಚಾರಕ್ಕೆ ಮೀಸಲಾಗಿರುವದೆಂದೂ ದೃಢೀಕರಿಸುವೆವು.

**ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ,**
**ಕುಂಜಿಬೆಟ್ಟು, ಉಡುಪಿ – 2.**



## ಮುಂದಿನ ಪ್ರಕಟಣೆಗಳು

೧) ವೇದೋಕ್ತ ಜೀವನಾದರ್ಶಮಾರ್ಗ

೨) ಆದರ್ಶ ಪತಿ ಪತ್ನಿಯರು

೩) ಪ್ರಾಣಾಯಾಮದ ಉದ್ದೇಶ್ಯ.

# ವೈದಿಕ ಧರ್ಮದ ಮೌಲಿಕ ತತ್ತ್ವಗಳು

ವೈದಿಕ ಧರ್ಮದ ಸಾರ್ವಭೌಮ, ಹಾಗೂ ಸಾರ್ವಕಾಲಿಕ ಸಿದ್ಧಾಂತಗಳನ್ನು ಮೂಲಭೂತವಾದ ತತ್ವಗಳನ್ನು ಪ್ರಶ್ನೋತ್ತರಗಳ ರೀತಿಯಲ್ಲಿ, ಇಬ್ಬರು ಸಹೋದರಿಯರ ಆತ್ಮೀಯ ಸಂವಾದದ ಕ್ರಮದಲ್ಲಿ ರಚಿಸಲಾಗಿರುವ ಲಘು ಗ್ರಂಥವಿದು. 1) ದೇವರಿದ್ದಾನೆಯೋ? 2) ದೇವರು ಸೃಷ್ಟಿಕರ್ತನೇನು? 3) ದೇವರಲ್ಲಿ ಭಕ್ತಿಯನ್ನೇತಕ್ಕಿಡಬೇಕು? 4) ದೇವರು ಆಕಾರವುಳ್ಳವನಲ್ಲವೇತಕ್ಕೆ? 5) ದೇವರ ಧ್ಯಾನಮಾಡುವುದು ಹೇಗೆ? 6) ದೇವರು ನ್ಯಾಯಕಾರಿಯೋ, ದಯಾಳುವೋ? 7) ಭೂತ ಪ್ರೇತಗಳು ಎಂದರೇನು? 8) ಗ್ರಹಗಳಿಂದ ಸುಖ–ದುಃಖಗಳು ಲಭಿಸುವುವೇ? 9) ಶ್ರಾದ್ಧವನ್ನು ಮಾಡಬೇಕೋ ಮಾಡಬಾರದೋ? 10) ಯಜ್ಞ ಮತ್ತು ಯಜ್ಞೋಪವೀತ 11) ವರ್ಣ ವ್ಯವಸ್ಥೆ ಜನ್ಮದಿಂದಲೋ, ಕರ್ಮದಿಂದಲೋ? 12) ನಮಸ್ತೇ ಎಲ್ಲಿಂದ ಪ್ರಾರಂಭವಾಯಿತು? 13) ಮಾಂಸಾಹಾರ ಉಚಿತವೊ? ಅನುಚಿತವೋ? 14) ಸಂಪೂರ್ಣ ಸೃಷ್ಟಿ ಭಗವಂತನಿಂದ ಆಗಿದೆಯೇ? ಎಂಬ ಮಹತ್ವ ಪೂರ್ಣ ಪ್ರಶ್ನೆಗಳಿಗೆ ಸರಳವೂ, ಸುಲಲಿತವೂ, ಯುಕ್ತಿಸಂಗತವೂ ಆದ ಉತ್ತರಗಳನ್ನು ಇದರಲ್ಲಿ ಕಾಣಬಹುದು. ನಮ್ಮ ಧರ್ಮದ ವಾಸ್ತವಿಕ ಸ್ವರೂಪವನ್ನು ತಿಳಿಯಬಯಸುವ ಪ್ರತಿಯೋರ್ವ ಜಿಜ್ಞಾಸುವೂ ಅಗತ್ಯ ಓದಬೇಕಾದ ಪುಸ್ತಕವಿದು– **ಪುಟಗಳು 136 ಬೆಲೆ 7–00 ಅಂಚೆವೆಚ್ಚ 2–00**

---

## ವೇದಮಾತಾ ಗಾಯತ್ರೀ

ಚತುರ್ವೇದಗಳಲ್ಲಿ ಎಲ್ಲಾ ಮಂತ್ರಗಳೂ ಮಹಿಮಾನ್ವಿತವೇ ಆಗಿದ್ದರೂ ಗಾಯತ್ರೀ ಮಂತ್ರ ಇವೆಲ್ಲವುಗಳಲ್ಲಿಯೂ ಅಗ್ರಗಣ್ಯಸ್ಥಾನ ಪಡೆದು ವೈದಿಕ ಧರ್ಮೀಯರ ಬಾಳಿನಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿದೆ, ಅದಕ್ಕಿಷ್ಟು ಗೌರವ-ಗರಿಮೆ ಮೂಡಿಬರಲು ಕಾರಣವಾದರೂ ಏನು? ಮಾನವ ಮಾತ್ರರ ಕಲ್ಯಾಣಕ್ಕೆ ಈ ಗಾಯತ್ರೀ ಉಪಾಸನೆ ಹೇಗೆ ವರದಾಯಿನಿಯಾಗಿದೆ? ಇದನ್ನು ಉಪಾಸಿಸುವವನ ಮನ_ಬುದ್ಧಿ–ಆತ್ಮಗಳ ಮೇಲೆ ಇದರ ಅಚ್ಚಳಿಯದ ಪ್ರಭಾವ ಹೇಗೆ ಬೀಳುವುದು? ಈ ವಿಷಯಗಳ ಬಗೆಗೆ ವಿಸ್ತೃತವೂ, ಯುಕ್ತಿಸಂಗತವೂ ಆದ ದಾರ್ಶನಿಕ ವಿಮರ್ಶೆಗಳೊಂದಿಗೆ ವೈಜ್ಞಾನಿಕ ವಿಶ್ಲೇಷಣೆ ಹೊಂದಿರುವ ಈ ಗ್ರಂಥವನ್ನು ಆದ್ಯೋಪಾಂತ ಶ್ರದ್ಧಾಪುರಸ್ಸರವಾಗಿ ಓದಿದ ಯಾವುದೇ ವ್ಯಕ್ತಿಗೆ ಈ ಸಂಬಂಧವಾದ ಎಲ್ಲಾ ಭ್ರಾಂತಿಗಳೂ ನಿರ್ಮೂಲವಾಗಿ ಅವನ ಬದುಕಿಗೆ ಹೊಸಬೆಳಕು ಸಿಕ್ಕುವುದರಲ್ಲಿ ಸಂಶಯವಿಲ್ಲ. **ಬೆಲೆ 8–00**

ಕನ್ನಡದ ಏಕಮೇವಾದ್ವಿತೀಯ ವೈದಿಕ ಮಾಸಪತ್ರಿಕೆ

# ವೇದಪ್ರಕಾಶ

ಸಮಸ್ತ ಮಾನುಕುಲವನ್ನೇ ಏಕಸೂತ್ರದಲ್ಲಿ ಪೋಣಿಸಿ, ಅವರ ಶಾರೀರಿಕ, ಮಾನಸಿಕ, ಆತ್ಮಿಕ ಹಾಗೂ ಸಾಮಾಜಿಕ ಉನ್ನತಿಯನ್ನು ಸಾಧಿಸಲಿಕ್ಕಾಗಿ ಇರುವ ಏಕೈಕ ಆಶಾಜ್ಯೋತಿ ಎಂದರೆ ಸಾರ್ವಭೌಮವೂ, ಸಾರ್ವಕಾಲಿಕವೂ, ವೈಜ್ಞಾನಿಕವೂ ಆದ ಸತ್ಯವನ್ನು ಪ್ರತಿಪಾದಿಸುವ ವೇದಗಳು. ಇಂದಿನ ವಿಜ್ಞಾನಯುಗದಲ್ಲಿ ಬುದ್ಧಿಗಮ್ಯವಾದ ಈ ವೇದಗಳ ಸಂದೇಶವೇ ಮಾನವ ಸಮಸ್ಯೆಗಳಿಗೆಲ್ಲಾ ತಾರಕ. ಈ ನಿರ್ಮಲಜ್ಞಾನವಾರಿಧಿಯಾದ ವೇದಗಳ ಸಂದೇಶವನ್ನು ಕನ್ನಡ ಜನತೆಯ ಮನೆ-ಮನೆಗೆ, ಮನ-ಮನಕ್ಕೆ ಮುಟ್ಟಿಸುವ ಕೈಂಕರ್ಯವನ್ನು ನಡೆಸುತ್ತಿದೆ **'ವೇದಪ್ರಕಾಶ'** ಮಾಸಪತ್ರಿಕೆ. 1975ರಿಂದಲೂ ವೇದದ ಪ್ರಕಾಶವನ್ನು ಕನ್ನಡ ಜನತೆಯ ಹೃದಯ ಮಂದಿರಗಳಲ್ಲಿ ನೆಲೆಗೊಳಿಸುವ ಮಣಿಹ ಹೊತ್ತು ಸಾಗುತ್ತಿರುವ ಈ ಪತ್ರಿಕೆಗೆ ತಾವೂ ಸದಸ್ಯರಾಗಿರಿ. ತಮ್ಮ ಬಂಧುಮಿತ್ರರೂ ಸದಸ್ಯರಾಗುವಂತೆ ಪ್ರೇರಿಸಿ

**ಆತ್ಮೀಯ ಸಹಕಾರ ನೀಡಿರಿ.**

ಲೈಬ್ರರಿ ಎಡಿಸನ್ ವಾರ್ಷಿಕ ಚಂದಾ 30-00 ಸಾದಾ ಪ್ರತಿ 25-00

ದ್ವೈವಾರ್ಷಿಕ ಚಂದಾ 48-00 ಆಜೀವ ಸದಸ್ಯತ್ವ 250-00

ಪೋಷಕರು 501-00 ಮಹಾಪೋಷಕರು 1001-00

ಹಣವನ್ನು ಎಂ. ಓ. ಅಥವಾ ಡ್ರಾಫ್ಟ್ ಮೂಲಕ ಕೆಳಗಿನ ವಿಳಾಸಕ್ಕೆ ಕಳುಹಿಸಿ ಹಾರ್ದಿಕ ಸಹಕಾರ ನೀಡಿರಿ.

**ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ,**

ಕುಂಜಿಬೆಟ್ಟು, ಉಡುಪಿ-576 102.

ಸತ್ಯಪ್ರಕಾಶನ, ಕುಂಜಿಬೆಟ್ಟು, ಉಡುಪಿ-576 102